ಭಾರತೀಯ ಸಾಹಿತ್ಯದ ನಿರ್ಮಾಣಕಾರರು

# ಸರಳದಾಸ

ಮೂಲ ಲೇಖಕರು
**ಕೃಷ್ಣಚಂದ್ರ ಪಾಣಿಗ್ರಾಹಿ**

ಅನುವಾದಕರು
**ಜಿ ವೆಂಕಟಸುಬ್ಬಯ್ಯ**



ಸಾಹಿತ್ಯ ಅಕಾದೆಮಿ

*Saraladasa* – Kannada translation by G. Venkatasubbiah of the English monograph by Krishna Chandra Panigrahi Sahitya Akademi, New Delhi (1985) SAHITYA AKADEMI
REVISED PRICE RS. 15.00


*First Published 1985*

**ಸಾಹಿತ್ಯ ಅಕಾದೆಮಿ**

**ಪ್ರಧಾನ ಕಾರ್ಯಾಲಯ**

ರವೀಂದ್ರಭವನ, ೩೫ ಫಿರೋಜಶಾಹ ರಸ್ತೆ, ನವದೆಹಲಿ ೧೧೦ ೦೦೧

**ಪ್ರಾದೇಶಿಕ ಕಾರ್ಯಾಲಯಗಳು**

೨೯ ಎಲ್ಡಾಮ್ಸ್ ರಸ್ತೆ, ತೇನಾಂಪೇಟೆ, ಮದ್ರಾಸ್ ೬೦೦ ೦೧೮

ಬ್ಲಾಕ್ V ಬಿ, ರವೀಂದ್ರ ಸರೋಬರ್ ಸ್ಟೇಡಿಯಮ್, ಕಲ್ಕತ್ತಾ ೭೦೦ ೦೨೯

೧೭೨ ಮುಂಬಯಿ ಮರಾಠಿ ಗ್ರಂಥ ಸಂಗ್ರಹಾಲಯ ಮಾರ್ಗ
ದಾದರ್, ಮುಂಬಯಿ ೪೦೦ ೦೧೪

SAHITYA AKADEMI
REVISED PRICE RS. 15.00

ಮುದ್ರಕರು : ಹರ್ಷ ಪ್ರಿಂಟರ್ಸ್, ಮೈಸೂರು ೫೭೦ ೦೦೪

# ಅನುಕ್ರಮಣಿಕೆ

# 1. ಕವಿ ಮತ್ತು ಅವನ ಕಾವ್ಯಗಳು

ಒರಿಸ್ಸಾ ಪ್ರಾಂತವು ಭರತ ಖಂಡದ ಆಗ್ನೇಯ ದಿಕ್ಕಿನಲ್ಲಿ ಆರ್ಯ ಭಾಷೆಗಳ ಮತ್ತು ದ್ರಾವಿಡ ಭಾಷೆಗಳ ಜನಾಂಗಗಳ ನಡುವೆ ಇದ್ದು ಭಾರತ ಸಂಸ್ಕೃತಿಯ ಆ ಎರಡು ವಾಹಿನಿಗಳ ಸಂಗಮಸ್ಥಳವಾಗಿ ಕಾಲಾನುಗತಿಯಿಂದ ಒರಿಸ್ಸಾ ಸಾಹಿತ್ಯವೆಂಬ ತನ್ನ ಸ್ವಂತ ಸಾಹಿತ್ಯವನ್ನು ಸೃಷ್ಟಿಮಾಡಿತು. ಸರಳದಾಸನಿಗಿಂತ ಹಿಂದೆ ಇತರ ಕವಿಗಳು ಇದ್ದಿರಬಹುದಾದರೂ ಸರಳದಾಸನನ್ನೇ ಒರಿಯಾ ಸಾಹಿತ್ಯದ ಮೂಲ ಪುರುಷನೆಂದು ಸಾಮಾನ್ಯವಾಗಿ ಪರಿಗಣಿಸಲಾಗಿದೆ. ಈ ಸಾಹಿತ್ಯದ ಬಗ್ಗೆಯು ಚಿರಂತನ ವಾಗಿ ಸ್ವಂತಿಕೆಯುಳ್ಳ ಅನೇಕ ಸಾಹಿತ್ಯ ಸ್ವರೂಪಗಳನ್ನೂ ಸಂಪ್ರದಾಯಗಳನ್ನೂ ಬೆಳೆಸುತ್ತಾ ಇಂದಿನವರೆಗೆ ವಿಶಾಲಗೊಳ್ಳುತ್ತಿರುವ ಪ್ರವಾಹವಾಗಿ ಹರಿದು ಬಂದಿದೆ. ಸರಳದಾಸನ ಮಹಾಕಾವ್ಯಗಳಲ್ಲಿ ಈಗ ಗೊತ್ತಿಗೆ ಬಂದಿರುವುವು ಮೂರು, ವಿಲಂಕಾ ರಾಮಾಯಣ, ಮಹಾಭಾರತ ಮತ್ತು ಚಂಡೀಪುರಾಣ. ಇವುಗಳಲ್ಲಿ ಅತನ ಬೃಹತ್ಕಾವ್ಯ ವಾದ ಮಹಾಭಾರತದಲ್ಲಿ ಸುಮಾರು ಎಂಭತ್ತಮೂರು ಸಾವಿರ ಪದ್ಯಗಳಿವೆ. ಪ್ರತಿಪದ್ಯ ದಲ್ಲಿಯೂ ಎರಡೆರಡು ಸಾಲುಗಳಿದ್ದು, ಮುದ್ರಣದಲ್ಲಿ ಎರಡು ಸಾವಿರದ ಮುನ್ನೂರ ಒಂಬತ್ತು ಪುಟಗಳನ್ನು ಆಕ್ರಮಿಸಿಕೊಳ್ಳುತ್ತವೆ. ವಿಲಂಕಾ ರಾಮಾಯಣ, ಮಹಾಭಾರತ, ಚಂಡೀಪುರಾಣ–ಇವು ಕ್ರಮವಾಗಿ ಮೊದಲ, ಎರಡನೆಯ, ಮೂರನೆಯ ಕೃತಿಗಳೆಂದು ಕವಿಯೇ ಸ್ಪಷ್ಟವಾಗಿ ಹೇಳಿದ್ದಾನೆ.

ಈ ಎಲ್ಲ ಗ್ರಂಥಗಳಿಗೂ ಭಾರತದ ವಿವಿಧ ಪುರಾಣೇತಿಹಾಸಗಳೇ ಮೂಲ. ವಿಲಂಕಾ ರಾಮಾಯಣದಲ್ಲಿ ರಾಮನಿಗೂ ಸಹಸ್ರಶಿರ ರಾವಣನಿಗೂ ನಡೆದ ಯುದ್ಧದ ಕಥೆಯು ವಿವೃತವಾಗಿದೆ. ರಾಮನಿಗೂ ಸೀತೆಗೂ ನಡೆದ ಸಂಭಾಷಣೆಯಿಂದ ಕಥೆ ಪ್ರಾರಂಭ ವಾಗುತ್ತದೆ. ಆಗ ರಾಮನು ತನ್ನ ಸ್ವಂತ ಧೈರ್ಯ ಸಾಹಸಗಳಿಂದಲೂ ಅಂತಶ್ಶಕ್ತಿ ತನ್ಯ ದಿಂದಲೂ ರಾವಣನನ್ನು ಕೊಂದನೆಂದು ಜಂಭ ಪಡುತ್ತಾನೆ. ಸೀತೆಯು ಆ ಮಾತಿಗೆ ಒಪ್ಪುವುದಿಲ್ಲ; ತನ್ನ ಸಹಾಯವಿಲ್ಲದಿದ್ದರೆ ಆ ಭಯಂಕರ ದೈತ್ಯನನ್ನು ಕೊಲ್ಲುವುದು ರಾಮನಿಗೆ ಸಾಧ್ಯವಾಗುತ್ತಿರಲಿಲ್ಲವೆಂದು ಎದುರುತ್ತರವೀಯುತ್ತಾಳೆ. ವಿಲಂಕೆಯೆಂಬ ದ್ವೀಪದಲ್ಲಿ ಸಹಸ್ರಶಿರನೆಂಬ ಹೆಸರುಳ್ಳ ಸಾವಿರತಲೆಯ ರಾಕ್ಷಸನು ಇನ್ನೂ ಬದುಕಿ ದ್ದಾನೆಂದೂ ರಾಮನಿಗೆ ತನ್ನ ಸ್ವಂತ ಪರಾಕ್ರಮದಲ್ಲಿ ಅಷ್ಟೊಂದು ದೃಢವಿಶ್ವಾಸವಿದ್ದರೆ ಒಬ್ಬನೇ ಹೋಗಿ ಅವನನ್ನು ಕೊಲ್ಲಲು ಪ್ರಯತ್ನಿಸಬಹುದೆಂದೂ ತಿಳಿಸುತ್ತಾಳೆ. ರಾಮನಿಗೆ ಇದರಿಂದ ಕೋಪಬಂದು ಅವನು ತನ್ನ ಪಟ್ಟಾಭಿಷೇಕಕ್ಕಾಗಿ ನಡೆಯುತ್ತಿದ್ದ ಸಂಭ್ರಮದ ಏರ್ಪಾಡುಗಳನ್ನೆಲ್ಲ ತೊರೆದು ಆಪ್ತಾನುಚರನಾದ ಹನುಮಂತನೊಡನೆ ವಿಲಂಕಾ ದ್ವೀಪಕ್ಕೆ ಹೊರಟು ಹೋಗುತ್ತಾನೆ. ಅಲ್ಲಿ ಅನೇಕ ಅಪಾಯಗಳನ್ನು ಎದುರಿಸಿ ದೈತ್ಯರೊಡನೆ ನೂರಾರು ಯುದ್ಧಗಳನ್ನು ಮಾಡಿದರೂ ಸಾವಿರತಲೆಯ ರಾವಣನನ್ನು

ಕೊಲ್ಲಲು ಅವನಿಗೆ ಅಸಾಧ್ಯವಾಗುತ್ತದೆ. ಆ ದ್ವೀಪಕ್ಕೆ ಸೀತೆಯನ್ನು ಕರೆತರುವುದನ್ನು ಬಿಟ್ಟರೆ ಬೇರೆ ದಾರಿಯೇ ಇಲ್ಲದಂತಾಗುತ್ತದೆ. ಸೀತೆಯು ಗೆಲವಿನಿಂದ ಆ ದ್ವೀಪಕ್ಕೆ ಬಂದು ಯುದ್ಧರಂಗದಲ್ಲಿ ಅತ್ಯಪೂರ್ವ ಸುಂದರಿಯಾಗಿ ಕಾಣಿಸಿಕೊಳ್ಳುತ್ತಾಳೆ. ಅವಳ ಸೌಂದರ್ಯಕ್ಕೆ ಮರುಳುಹೋಗಿ ದೈತ್ಯನು ಮೂರ್ಛಾವಸ್ಥೆಯಲ್ಲಿದ್ದಾಗ, ರಾಮ ಬಿಟ್ಟ ಬಾಣವೊಂದು ರಾಕ್ಷಸನನ್ನು ಸಾಯಿಸಿಬಿಡುತ್ತದೆ.

ಕವಿಯು ತನ್ನ ಮಹಾಭಾರತವನ್ನು ರಚಿಸುವುದರಲ್ಲಿ, ಭಾರತೀಯ ಸಾಹಿತ್ಯದ ಓದುಗರೆಲ್ಲರಿಗೂ ಚಿರಪರಿಚಿತವಾದ ಸಂಸ್ಕೃತ ಮಹಾಭಾರತದ ಕಥೆಯ ಮುಖ್ಯ ರೂಪರೇಷೆಗಳನ್ನೇ ಅನುಸರಿಸಿದ್ದರೂ ಅನೇಕ ಕಡೆಗಳಲ್ಲಿ ತನ್ನ ಸ್ವಂತ ಕಥೆಗಳನ್ನೂ ಇತರ ವಿಷಯಗಳನ್ನೂ ಅತ್ಯಧಿಕವಾಗಿ ಸೇರಿಸಿ ನಿರೂಪಣೆಯಲ್ಲಿ ಅನ್ಯಮಾರ್ಗವನ್ನು ಹಿಡಿದಿದ್ದಾನೆ. ಸರಳದಾಸನ ಮಹಾಭಾರತವು ಅದರ ಸಂಪೂರ್ಣ ಸ್ವರೂಪದಲ್ಲಿ ಒಂದು ಹೊಸ ಸೃಷ್ಟಿಯಾಗಿದೆ; ರಾಮಾಯಣವನ್ನು ಅನುಸರಿಸಿದ್ದರೂ ಕಾಳಿದಾಸನ ರಘುವಂಶವು ಸ್ಪಷ್ಟವಾಗಿ ಸ್ವಂತವಾದ ಬೇರೊಂದು ಸೃಷ್ಟಿಯಾಗಿರುವಂತೆ ಇದೂ ಬೇರೆಯಾಗಿದೆ.

ಮೂರನೆಯ ಕಾವ್ಯವಾದ ಚಂಡೀಪುರಾಣವು ಸಂಸ್ಕೃತ ಸಾಹಿತ್ಯದಲ್ಲಿರುವ, ಬಹು ಪ್ರಸಿದ್ಧವಾದ, ದುರ್ಗೆಯಿಂದ ಮಹಿಷಾಸುರನು ಹತನಾಗುವ ಕಥೆಯನ್ನು ಆಧಾರವಾಗಿ ಹೊಂದಿದೆ. ಆದರೆ, ಇಲ್ಲಿಯೂ ಒರಿಯಾ ಕವಿಯು ಅನೇಕ ಕಡೆಗಳಲ್ಲಿ ಮೂಲ ಕಥೆಯಿಂದ ಬೇರೆಯಾದ ಮಾರ್ಗವನ್ನು ಹಿಡಿದಿರುವುದು ಕಂಡುಬರುತ್ತದೆ. ಕೋಣದ ತಲೆಯುಳ್ಳ ಮಹಿಷಾಸುರನು ಅನೇಕ ಬಗೆಯ ನಾಶಕಾರಕ ಕೃತ್ಯಗಳನ್ನುಮಾಡಿ, ನಿರಪರಾಧಿಗಳಾದ ಲಕ್ಷಾಂತರ ಜನರನ್ನು ಕೊಂದು, ಸ್ವರ್ಗಕ್ಕೆ ಅನೇಕವೇಳೆ ದಾಳಿಯಿಟ್ಟು, ದೇವತೆಗಳ ರಾಜನಾದ ಇಂದ್ರನ ಸಿಂಹಾಸನವನ್ನೇ ಸ್ವಾಧೀನ ಪಡಿಸಿಕೊಂಡು, ದೇವತೆಗಳನ್ನೆಲ್ಲ ತನ್ನ ಸೇವಕರನ್ನಾಗಿ ಮಾಡಿಕೊಂಡಿದ್ದನು. ಅಂಥವನನ್ನು ಕೊಲ್ಲಲು ವಿಷ್ಣುವು ಇಹಲೋಕದಲ್ಲಿ ಅವತರಿಸಬೇಕೆಂದು ದೇವತೆಗಳು ವಿಷ್ಣುವನ್ನು ಪ್ರಾರ್ಥನೆಮಾಡುವುದರಿಂದ ಇಲ್ಲಿಯ ಕಥೆಯು ಮೊದಲಾಗುತ್ತದೆ. ದೇವತೆಗಳು ಹೀಗೆ ಪ್ರಾರ್ಥಿಸುತ್ತಿದ್ದಾಗ ಆ ಸ್ಥಳಕ್ಕೆ ಮಹಿಷಾಸುರನು ಬಂದು ತನ್ನ ಕೊಂಬಿನಿಂದ ಒಂದು ಬೆಟ್ಟವನ್ನೇ ಎತ್ತಿ ಅವರ ಮೇಲೆ ಎಸೆದನು. ಹೆದರಿಕೊಂಡವರೂ ಕೋಪಿಷ್ಠರೂ ಆದ ದೇವತೆಗಳ ದೇಹದಿಂದ ಭಯಂಕರವಾದ ಜ್ವಾಲೆಯು ಹೊರ ಹೊಮ್ಮಿ ಅದ್ಭುತಾಕಾರವನ್ನು ಪಡೆದು ವ್ಯಾಪಿಸಿತು. ಆ ಬೆಂಕಿಯಿಂದ ಅಸಾಧಾರಣ ಸೌಂದರ್ಯವುಳ್ಳ ಒಬ್ಬ ಹೆಣ್ಣು ಹೊರಬಂದಳು.

ದೇವತೆಗಳು ಅವಳಿಗೆ ದುರ್ಗೆಯೆಂದು ಹೆಸರಿಟ್ಟು ತಮ್ಮ ಆಯುಧಗಳನ್ನೆಲ್ಲ ಅವಳಿಗೆ ಕೊಟ್ಟು ಈ ಭಯಂಕರನಾದ ದೈತ್ಯನನ್ನು ಕೊಲ್ಲುವಂತೆ ಅವಳನ್ನು ಕೇಳಿಕೊಂಡರು. ದುರ್ಗೆಯು ಅವರ ಪ್ರಾರ್ಥನೆಯನ್ನು ಮನ್ನಿಸಿ ರತ್ನಗಿರಿಯೆಂಬ ಪರ್ವತ ಶಿಖರದಲ್ಲಿ ನೆಲೆ ನಿಂತಳು. ಮಹಿಷಾಸುರನಿಗೂ ಅವನ ಅತ್ಯಂತ ಶ್ರೇಷ್ಠರಾದ

ದಳಪತಿಗಳಿಗೂ ಮಿಥ್ಯಾ ಮೋಹವನ್ನು ಪ್ರಕಟಿಸಿ ದಳಪತಿಗಳನ್ನೆಲ್ಲ ಒಬ್ಬೊಬ್ಬರನ್ನಾಗಿ ಕೊಂದಳು. ತನ್ನ ದೇಹದಿಂದ, ಭಯಂಕರಾಕಾರರೂ ಅತಿ ಪರಾಕ್ರಮಿಗಳೂ ಆದ ಸಾವಿರಾರು ಸ್ತ್ರೀ ಸೈನಿಕರನ್ನು ಸೃಷ್ಟಿಸಿದಳು. ಅವರೆಲ್ಲ ರಾಕ್ಷಸರೊಡನೆ ಹೋರಾಡಿ, ಅವರ ರಕ್ತವನ್ನು ಹೀರಿ ಮಾಂಸವನ್ನು ತಿಂದು ಅತಿ ಸಂತೋಷದಿಂದ ತೇಗಿ ಕುಣಿದಾಡಿದರು. ಮಹಿಷಾಸುರನ ಸರದಿ ಕೊನೆಗೆ ಬಂತು. ಅವನೊಡನೆ ನೇರವಾದ ಯುದ್ಧದಲ್ಲಿ ಅವಳು ಹೋರಾಡುತ್ತಿದ್ದಾಗ ಅವನ ಸಾಮರ್ಥ್ಯವು ಅವಳ ಪರಾಕ್ರಮಕ್ಕಿಂತ ಅಧಿಕವಾಗಿರುವಂತೆ ಕಂಡುಬಂದಿತು. ಅತಿ ನಿರಾಸೆಯಿಂದ ದುರ್ಗೆಯು ಯುದ್ಧವನ್ನು ನಿಲ್ಲಿಸುವುದರಲ್ಲಿದ್ದಾಗ, ಅವಳಿಗೆ ಒಂದು ಅಶರೀರವಾಣಿ ಕೇಳಿಸಿತು. ಅದರ ಸೂಚನೆಯನ್ನು ಅನುಸರಿಸಿ ದುರ್ಗೆಯು ಆ ಮಹಾಸಮರ್ಥನಾದ ರಾಕ್ಷಸನ ಮುಂದೆ ತನ್ನ ವಸ್ತ್ರಗಳನ್ನೆಲ್ಲ ಬಿಚ್ಚಿ ನಗ್ನಳಾಗಿ ನಿಂತಳು. ಆ ಬತ್ತಲೆ ಶರೀರವನ್ನು ಕಂಡು ಮೋಹಾಭಿಭೂತನಾಗಿ ರಾಕ್ಷಸನು ತನ್ನ ಸಾಮರ್ಥ್ಯವನ್ನೆಲ್ಲ ಕಳೆದುಕೊಂಡನು. ಈ ಅವಕಾಶವು ಸಿಕ್ಕಿದಕೂಡಲೆ ದುರ್ಗೆಯು ತನ್ನ ತ್ರಿಶೂಲವನ್ನು ಅವನೆದೆಗೆ ತಿವಿದು ಅವನನ್ನು ಒಮ್ಮೆಗೇ ಕೊಂದುಬಿಟ್ಟಳು. ಆ ರಾಕ್ಷಸನನ್ನು ಕೊಂದ ಬಳಿಕ ಅವಳಿಗೆ ನಾಚಿಕೆಯೂ ದುಃಖವೂ ಉಂಟಾಗಿ ಆತನಿಗೆ ಅನೇಕ ವರಗಳನ್ನು ಕೊಟ್ಟು ಮಹಾಪರಾಕ್ರಮಿಯನ್ನಾಗಿ ಮಾಡಿದ ದೇವತೆಗಳ ಮೇಲೆ ಅವಳಿಗೆ ಕ್ರೋಧವುಂಟಾಯಿತು. ಅವರನ್ನೂ ಕೂಡ ಕೊಲ್ಲಬೇಕೆಂದು ಅವಳು ಯೋಚಿಸಿದಳು. ಆದರೆ ಪರಶಿವನು ಅವಳನ್ನು ಪ್ರಾರ್ಥಿಸಿ ಅವಳ ಅನುಗ್ರಹವನ್ನು ಪಡೆದನು. ಕೊನೆಗೆ ಅವಳು ಶಿವನ ಅರ್ಧಾಂಗಿಯಾಗಲು ಒಪ್ಪಿದಳು.

ಈ ಮೂರು ಗ್ರಂಥಗಳೂ ಮೂಲತಃ ಒಂದೇ ಛಂದೋರೂಪದಲ್ಲಿ ರಚಿತವಾಗಿವೆ. ಪ್ರತಿಯೊಂದು ದ್ವಿಪದಿಯ ಒಂದೊಂದು ಸಾಲಿನಲ್ಲಿಯೂ ಸಾಮಾನ್ಯವಾಗಿ ಹದಿನೆಂಟು ಅಕ್ಷರಗಳಿರುತ್ತವೆ. ಆದರೆ ಕೆಲವು ಸಂದರ್ಭಗಳಲ್ಲಿ ಕವಿಯೇ ಈ ಕ್ರಮವನ್ನು ಮೀರಿದ್ದಾನೆ; ಪದ್ಯದ ಎರಡು ಸಾಲುಗಳು ಸಮಾನವಾಗಿಲ್ಲದಂತೆ ಮಾಡಿದ್ದಾನೆ. ಕವಿಯು ತನ್ನ ಚಂಡೀಪುರಾಣದಲ್ಲಿ ತಾನು ಹೀಗೆ ಸಮಾನವಾದ ಮತ್ತು ಸಮಾನವಲ್ಲದ ದ್ವಿಪದಿಗಳನ್ನು ರಚಿಸಿರುವುದಾಗಿ ತಿಳಿಸಿ ವಾಚಕರು ಅವುಗಳನ್ನು ಸಮಾನವಾಗಿ ಮಾಡಿಕೊಳ್ಳಬೇಕೆಂದು ಪ್ರಾರ್ಥಿಸಿದ್ದಾನೆ. ಆದುದರಿಂದ ಅವನ ಕಾವ್ಯದ ಛಂದೋರೂಪವು ರಸಾವೇಶದಿಂದ ಅಲ್ಲಲ್ಲಿ ಎಡವಿದೆಯೆಂದು ಕಾಣುತ್ತದೆ.

ಒರಿಸ್ಸಾ ಪ್ರಾಂತದಲ್ಲಿ ಮುದ್ರಣವು ಪ್ರಚುರವಾಗುವುದಕ್ಕೆ ಮುಂಚೆ, ಹತ್ತೊಂಬತ್ತನೆಯ ಶತಮಾನದವರೆಗೆ, ಬರವಣಿಗೆಗೆ ಉಪಯೋಗಿಸುತ್ತಿದ್ದುದು ಓಲೆಗರಿ ಮತ್ತು ಮೊನಚಾದ ತುದಿಯುಳ್ಳ ಕಂಟಗಳು. ತೊಡೆಯನ್ನೇ ಮೇಜದಂತೆ ಮಾಡಿಕೊಂಡು ಅದರಮೇಲೆ ಓಲೆಗರಿಯನ್ನಿಟ್ಟು ಅದರಲ್ಲಿ ಎರಡೂ ಕೈಗಳ ಸಹಾಯದಿಂದ ಈ ಕಂಟವನ್ನು ಉಪಯೋಗಿಸಿ ಅಕ್ಷರಗಳನ್ನು ಕೊರೆಯಬೇಕಾಗಿತ್ತು. ಶಾಯಿಯನ್ನು ಉಪಯೋಗಿಸುತ್ತಿರಲಿಲ್ಲ. ಬೆಂಡು, ತೊಗಟೆ, ಚರ್ಮ ಇವುಗಳಮೇಲೆ ಬರೆಯುವುದ

ಕ್ಕಿಂತ ಓಲೆಗರಿಯ ಮೇಲೆ ಬರೆಯುವುದು ಸ್ವಾಭಾವಿಕವಾಗಿಯೇ ಹೆಚ್ಚು ಕಾಲ ಹಿಡಿಯ ತಕ್ಕದ್ದೂ ಶ್ರಮಸಾಧ್ಯವಾದುದೂ ಆಗಿತ್ತು. ಈ ಶ್ರಮದಾಯಕವಾದ ಮಾರ್ಗವನ್ನು ಅನುಸರಿಸಿ ಕವಿಯು ರಚಿಸಿರುವ ಗ್ರಂಥರಾಶಿಯನ್ನು ನೋಡಿದರೆ, ಈ ಕವಿಯ ಕಾರ್ಯ ಕ್ಷಮತೆಯನ್ನು ನಾವು ಸುಲಭವಾಗಿ ಊಹಿಸಬಹುದು. ಸರಳದಾಸನ ಬರಹಗಳನ್ನು ಒಟ್ಟು ಸೇರಿಸಿದರೆ ಒರಿಯಾ ಸಾಹಿತ್ಯದಲ್ಲೆಲ್ಲ ಬೇರೆ ಯಾರೊಬ್ಬ ಕವಿಯ ಅಥವಾ ಲೇಖಕನ ಸಾಹಿತ್ಯರಚನೆಗಿಂತ ಗಾತ್ರದಲ್ಲಿ ಅಧಿಕವಾಗಿದೆ.

ಸರಳದಾಸನಿಗೆ ಕಾವ್ಯವೆನ್ನುವುದು ಅವನ ರಕ್ತದಲ್ಲಿಯೇ ತುಂಬಿದ್ದಿತು; ಅವನ ಮುಖದಿಂದ ಕಾವ್ಯವು ಹೊರ ಹೊಮ್ಮಿದಂತೆಲ್ಲ ಅವನ ಕಂಟದಿಂದ ಬರಹದಲ್ಲಿ ರೂಪು ಗೊಳ್ಳುತ್ತಿತ್ತು. ಅವನು ಕಾವ್ಯರಚನೆ ಮಾಡುತ್ತಿದ್ದಾಗ ಪುನರಾಲೋಚನೆ ಮಾಡುವುದ ಕ್ಕಾಗಲೀ, ತಿದ್ದುವುದಕ್ಕಾಗಲೀ ಅವನು ತಡೆದಂತೆ ಕಾಣುವುದಿಲ್ಲ. ಒಮ್ಮೆ ಬರೆದದ್ದೇ ಕೊನೆಯದು. ಒರಿಯಾ ಸಾಹಿತ್ಯದ ಹದಿನೇಳು ಹದಿನೆಂಟನೇ ಶತಮಾನದ ಗ್ರಂಥಗಳಲ್ಲಿ ಅತಿಸಾಧಾರಣವಾಗಿ ಕಂಡುಬರುವ ಶ್ಲೇಷೆಯಾಗಲೀ ಶಬ್ದಾಡಂಬರವಾಗಲೀ ಅವನ ಕಾವ್ಯಗಳಲ್ಲಿ ಎಲ್ಲಿಯೂ ಕಾಣಬರುವುದಿಲ್ಲ. ಅವನ ಪದ್ಯಗಳು ಎಲ್ಲಿಯೂ ಕೃತ್ರಿಮವಾಗಿ ಕಾಣದೆ ಸರಳವೂ ಶಕ್ತವೂ ಗೀತಮಯವೂ ಆಗಿವೆ. ಕೆಲವು ವೇಳೆ ಅವನ ಭಾಷೆಯು ಅತಿಶ್ರೇಷ್ಠಸ್ವರೂಪವನ್ನು ಪಡೆದರೂ ಸಾಮಾನ್ಯವಾಗಿ ಅದು ಮನೆಮಾತಿನಂತಿರು ತ್ತದೆ. ಕವಿಯು ಶಬ್ದಗಳನ್ನು ಆರಿಸುವ ಗೋಜಿಗೆ ಹೋದವನಲ್ಲ; ಅವನ ಕಾವ್ಯ ನಿರ್ಮಾಣಕ್ಕೆ ಎಲ್ಲ ಬಗೆಯ ಪದಗಳೂ ಸಮಾನವಾದ ಉಪಯೋಗವುಳ್ಳವುಗಳೇ ಆಗಿದ್ದುವು. ಅಧಿಕ ಸಂಸ್ಕೃತೀಕರಣದಿಂದ ಅವನ ಬರವಣಿಗೆಯು ಮುಕ್ತವಾಗಿದೆ.

ಸರಳದಾಸನ ಗ್ರಂಥಗಳು ಮುಂದಿನ ತಲೆಮಾರುಗಳಿಗೆ ಇಂಥ ಓಲೆಗರಿಗಳ ಹಸ್ತ ಪ್ರತಿಗಳ ಮುಖಾಂತರ ದೊರೆತುವು. ಈ ಓಲೆಗರಿ ಪ್ರತಿಗಳು ಒರಿಸ್ಸಾ ಪ್ರಾಂತದ ಎಲ್ಲ ಭಾಗಗಳಲ್ಲಿಯೂ ದೊರೆಯುವುದರಿಂದ ಆತನ ಕಾವ್ಯಗಳು ಪಡೆದಿದ್ದ ಜನಪ್ರಿಯತೆಯು ಗೊತ್ತಾಗುತ್ತದೆ. ಆದರೂ ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ ಈ ಗ್ರಂಥಗಳು ಮುದ್ರಿತ ರೂಪದಲ್ಲಿ ಹೊರಬಂದಮೇಲೆ ಇಂಥ ಹಸ್ತಪ್ರತಿಗಳ ರಕ್ಷಣೆಯ ಬಗ್ಗೆ ಜನರು ಉದಾಸೀನರಾಗಿದ್ದಾರೆ. ಈ ಹಸ್ತಪ್ರತಿಗಳಲ್ಲಿ ಅನೇಕ ಗ್ರಂಥದೋಷಗಳು ಸೇರಿ ಕೊಂಡಿದ್ದುವಲ್ಲದೆ ಅನೇಕ ಪ್ರಕ್ಷಿಪ್ತ ಭಾಗಗಳೂ ನುಸುಳಿಕೊಂಡಿದ್ದುವು. ಈ ಪುಸ್ತಕಗಳ ಮುದ್ರಣವು ವ್ಯಾಪಾರದೃಷ್ಟಿಯೊಂದರಿಂದಲೆ ಪ್ರಕಟಣೆಗೊಂಡುದರಿಂದ ಅವುಗಳಲ್ಲಿ ಈ ದೋಷಗಳನ್ನು ನಿವಾರಣೆ ಮಾಡುವುದು ಅಸಾಧ್ಯವಾಗಿದ್ದಿತು. ಇತ್ತೀಚೆಗೆ ಒರಿಸ್ಸಾ ಸರ್ಕಾರದ ಸಹಾಯದಿಂದ, ಅನೇಕ ಹಸ್ತಪ್ರತಿಗಳನ್ನು ತುಲನೆಮಾಡಿ ಸರಳ ಮಹಾ ಭಾರತದ ಸಂಪಾದಿತ ಕೃತಿಯೊಂದು ಸಿದ್ಧವಾಗಿದೆ; ಆದರೆ ಅದಿನ್ನೂ ಮುದ್ರಣ ವಾಗುತ್ತಿದೆ. ಸರಳದಾಸನ ಸಾಹಿತ್ಯವು ರಚಿತವಾದ ಕಾಲದ ಹಿನ್ನೆಲೆಯನ್ನು ಎಳ್ಳಷ್ಟೂ ಅರಿಯದ ಪ್ರಕಾಶಕರ ಅಜ್ಞಾನದಿಂದ, ಇಲ್ಲಿಯವರೆಗೂ ಪ್ರಕಟವಾಗಿರುವ ಮೂಲ

ಗ್ರಂಥದ ಸೌಂದರ್ಯವನ್ನೂ ಮೂಲಸ್ವರೂಪವನ್ನೂ ಹೊಸದಾಗಿ ಸಂಪಾದಿತವಾಗಿರುವ ಈ ಮುದ್ರಣವು ಎಷ್ಟರಮಟ್ಟಿಗೆ ಉಳಿಸಿದೆಯೆಂಬುದನ್ನು ಕಾದುನೋಡಬೇಕು.

ಸರಳದಾಸನ ಜನ್ಮದಿನವನ್ನು ನಿರ್ಧಾರವಾಗಿ ಹೇಳುವುದು ಅಸಾಧ್ಯವಾದರೂ ಅವನು ಕ್ರಿ.ಶ. ಹದಿನೈದನೆಯ ಶತಮಾನದ ದ್ವಿತೀಯಾರ್ಧದಲ್ಲಿ ಬದುಕಿದ್ದನೆಂದು ಸಕಾರಣವಾಗಿ ಹೇಳಬಹುದು. ಅವನ ಮಹಾಭಾರತದ ಆದಿಪರ್ವದ ಮೊದಲ ಭಾಗದಲ್ಲಿ ಪೂರಿಯ ಜಗನ್ನಾಥನನ್ನು ಕುರಿತ ದೀರ್ಘವಾದ ಸ್ತೋತ್ರವಿದೆ. ಒಟ್ಟು ಭಾರತದ ದೇವದೇವತೆಗಳಲ್ಲೆಲ್ಲಾ ಒರಿಸ್ಸಾ ಪ್ರಾಂತದ, ಪೂರಿಯ ಜಗನ್ನಾಥನು ಅತ್ಯಂತ ಪ್ರಾಧಾನ್ಯವನ್ನು ಅಂದೂ ಪಡೆದಿದ್ದನು; ಇಂದೂ ಪಡೆದಿದ್ದಾನೆ. ಈ ಜಗನ್ನಾಥ ದೇವರ ಅನೇಕ ಸಾಮರ್ಥ್ಯಗಳನ್ನು ಗುಣಗಣಗಳನ್ನು ವಿವರಿಸುವ ಈ ಪ್ರಾರ್ಥನಾ ಭಾಗದಲ್ಲಿ ಕವಿಯು, ಕಪಿಲೇಶ್ವರ ಮಹಾರಾಜನು ಈ ಮಹಾದೇವತೆಗೆ ಅನೇಕ ನಮಸ್ಕಾರಗಳನ್ನು ಮಾಡಿ ಬಹುವಿಧವಾದ ದತ್ತಿಗಳನ್ನು ಬಿಟ್ಟು ಕಲಿಯುಗದ ಪಾಪಗಳನ್ನು ಪರಿಹರಿಸಲು ಪ್ರಯತ್ನಿಸಿದನೆಂದು ಹೇಳಿದೆ. ಈ ಹೇಳಿಕೆಯಿಂದ ಸರಳದಾಸನು ಕ್ರಿ. ಶ. 1435 ರಿಂದ 1467 ರವರೆಗೆ ಒರಿಸ್ಸಾ ದೇಶವನ್ನಾಳಿದ ಗಜಪತಿ ವಂಶದ ಕಪಿಲೇಶ್ವರ ಅಥವಾ ಕಪಿಲೇಂದ್ರನ ಕಾಲದಲ್ಲಿ ತನ್ನ ಮಹಾಭಾರತವನ್ನು ರಚಿಸಲು ಮೊದಲು ಮಾಡಿದನೆಂಬ ಬಗ್ಗೆ ಯಾವ ಅನುಮಾನವೂ ಉಳಿಯುವುದಿಲ್ಲ. ಗಂಗದೊರೆಯಾದ ಅನಂಗಭೀಮದೇವ III ನು (ಕ್ರಿ. ಶ. 1211 – 1238) ತನ್ನ ರಾಜ್ಯವನ್ನು ಆಳುವವನು ಭಗವಾನ್ ಜಗನ್ನಾಥನೇ ಎಂದು ಸ್ಪಷ್ಟವಾಗಿ ಅರಿತು, ರಾಜ್ಯವನ್ನು ಆ ಪರಮಾತ್ಮನಿಗೇ ಅರ್ಪಿಸಿ ತಾನು ಆತನ ಪ್ರತಿನಿಧಿಯೆಂದೂ ಪ್ರಥಮ ಸೇವಕನೆಂದೂ ಘೋಷಿಸಿಕೊಂಡಿದ್ದನು. ಈ ಕಾರಣದಿಂದ ಸರಳದಾಸನು ಕಪಿಲೇಶ್ವರನನ್ನು ಜಗನ್ನಾಥನ ಸೇವಕನೆಂದೇ ವರ್ಣಿಸಿದ್ದಾನೆ. ಈ ಪದ್ಧತಿಯನ್ನು ಅನಂಗಭೀಮದೇವನ ನಂತರ ಬಂದ ದೊರೆಗಳೆಲ್ಲ ಪಾಲಿಸಿ ತಾವು ಜಗನ್ನಾಥನ ಪ್ರತಿನಿಧಿಗಳೆಂದೂ ಪ್ರಥಮ ಸೇವಕರೆಂದೂ ತಿಳಿದುಕೊಂಡಿದ್ದರು. ಈಗಲೂ ಕೂಡ ಒರಿಸ್ಸಾ ರಾಜ್ಯದ ಗಜಪತಿ ವಂಶದ ಪರಂಪರೆಯ ಪ್ರತಿನಿಧಿಯಾದ ಪೂರಿಯ ರಾಜನು, ಜಗನ್ನಾಥ ದೇವಾಲಯದ ಮೇಲ್ವಿಚಾರಕನೂ ಪ್ರಥಮ ಸೇವಕನೂ ಆಗಿದ್ದಾನೆ. ಈ ಕಾರಣಗಳಿಂದ ಸರಳ ಮಹಾಭಾರತದ ಪ್ರಾರಂಭದಲ್ಲಿ ಸ್ವಾಮಿ ಜಗನ್ನಾಥನ ಪ್ರಥಮ ಸೇವಕನೆಂದು ಚಿತ್ರಿತವಾಗಿರುವ ಕಪಿಲೇಶ್ವರ ಮಹಾರಾಜನು, ಕ್ರಿ. ಶ. 1435 ರಿಂದ 1467 ರವರೆಗೆ ಆಳಿದ ಸೂರ್ಯವಂಶದ ಅದೇ ಹೆಸರಿನ ರಾಜನಲ್ಲದೆ ಬೇರೆ ಯಾರೂ ಅಲ್ಲ. ಎಲ್ಲ ಚರಿತ್ರಕಾರರೂ ಸರಳದಾಸನ ಮತ್ತು ಕಪಿಲೇಶ್ವರ(ಕಪಿಲೇಂದ್ರ) ನ ಸಮಕಾಲೀನತೆಯನ್ನು ಒಪ್ಪಿಕೊಂಡಿದ್ದಾರೆ.[1]

ಸಂಸ್ಕೃತ ಮಹಾಭಾರತದ ಗಾತ್ರವನ್ನೇ ಹೋಲುವ ಸರಳ ಮಹಾಭಾರತದ ಗಾತ್ರದ ವಿಚಾರವಾಗಿ ಈ ಹಿಂದೆಯೇ ತಿಳಿಸಲಾಗಿದೆ. ಈ ಗ್ರಂಥವನ್ನು ಪೂರೈಸಲು ಕೊನೆಯಪಕ್ಷ ಹದಿನೈದು ವರ್ಷಗಳಾದರೂ ಆಗಿರಬೇಕೆಂದು ಗ್ರಹಿಸುವುದು ತಪ್ಪಾಗೆ

ಲಾರದು. ಆ ಪುಸ್ತಕವು ಪೂರೈಸುವ ವೇಳೆಗೆ ಕವಿಯು ಮುದುಕನಾಗಿದ್ದನೆಂಬುದಕ್ಕೆ ಕೆಲವು ಸೂಚನೆಗಳು ಆ ಕಾವ್ಯದಲ್ಲಿಯೇ ಕಂಡುಬರುತ್ತವೆ. ಭೀಷ್ಮಪರ್ವದಲ್ಲಿ ಒಂದುಕಡೆ ಅವನು ಹೀಗೆ ಹೇಳಿದ್ದಾನೆ: ''ಸರಳದಾಸನು ತನ್ನ ಮುಪ್ಪಿನಲ್ಲಿ ಹೀಗೆ ಹೇಳಿದ್ದಾನೆ''. ದ್ರೋಣಪರ್ವದಲ್ಲಿಯೂ ತನ್ನ ವಯಸ್ಸನ್ನು ಸೂಚಿಸುವ ಇಂಥದೇ ಹೇಳಿಕೆಯಿದೆ : ''ಓ ನನ್ನ ಆತ್ಮವೇ ನೀನೇಕೆ ವಕ್ರಮಾರ್ಗವನ್ನು ಅನುಸರಿಸುತ್ತಿದ್ದೀಯೆ ? ಮೃತ್ಯು ದೇವತೆಯಾದ ಯಮನು ನಿನ್ನ ಬಳಿಗೆ ಬಂದಿದ್ದಾನೆಂಬುದನ್ನು ನೀನು ತಿಳಿದಿಲ್ಲವೇ ? '' ಕವಿಯ ಕೊನೆಯ ಗ್ರಂಥವಾದ ಚಂಡೀಪುರಾಣದಲ್ಲಿ ಅವನು ಹೀಗೆ ಹೇಳಿದ್ದಾನೆ : ''ನನ್ನ ಬದುಕು ಎಷ್ಟು ಬೇಗ ಕಳೆದು ಹೋಗುತ್ತಿದೆ ; ಅಲ್ಲದೆ ರಾಹುವಿನಂತೆ ರೋಗ ಬೇರೆ ಹಿಡಿದು ಬಿಟ್ಟಿದೆ. ಹುಚ್ಚನಂತೆ ನಾನು ಕಾವ್ಯವನ್ನು ರಚಿಸುತ್ತಿದ್ದರೆ ಅದು ನನ್ನ ತಪ್ಪಲ್ಲ. ಈ ಕಾವ್ಯವನ್ನು ಹೇಗೆ ಪೂರೈಸಬಲ್ಲೆನೊ ನಾನು ಕಾಣೆ''. ಈ ಎಲ್ಲ ಹೇಳಿಕೆಗಳಿಂದ ಕವಿಯು ತುಂಬ ಮುದಿವಯಸ್ಸಿನ ತನಕ ಬದುಕಿದ್ದು ಕಾವ್ಯರಚನೆ ಮಾಡಿದನೆಂಬುದು ಸ್ಪಷ್ಟವಾಗುತ್ತದೆ. ಲೋಕಾಭಿರಾಮವಾಗಿ ಹೇಳುವುದಾದರೆ ಈ ಕವಿಯ ಕಾವ್ಯವು ಶೇಕ್‌ಸ್ಪಿಯರ್ ಮತ್ತು ತುಲಸಿದಾಸರ ಕಾವ್ಯಗಳಿಗಿಂತ ಒಂದು ಶತಮಾನದಷ್ಟು ಹಿಂದಿನದು.

ಕವಿಯ ಜನ್ಮಸ್ಥಳವೆಂದು ಆಗಿಂದಾಗ ಜನರು ಹೇಳುವ ಕನಕವತೀಪಟ್ಟಣವು ಈಗ ಮುನಿಗೋಸಾಯಿಯ ಮಠವನ್ನು ಹೊಂದಿರುವ ಈಗಿನ ತೆಂಕಾಳಿಯ ಪದವೆಂಬ ಸ್ಥಳ. ಆ ಮಠವೇ ಕವಿಯು ತನ್ನಕಾವ್ಯಗಳನ್ನು ರಚಿಸಿದ ಸ್ಥಳ. ಈ ಊರು ಕವಿಯ ಆರಾಧ್ಯ ದೇವತೆಯಾದ ಸರಳಾದೇವಿಯ ದೇವಸ್ಥಾನವುಳ್ಳ ಜಂಕಡ ಎಂಬ ಹಳ್ಳಿಯಿಂದ ಸ್ವಲ್ಪದೂರದಲ್ಲಿದೆ. ಕಟಕ್ ಪಟ್ಟಣದ ನೈಋತ್ಯ ದಿಕ್ಕಿನಲ್ಲಿ ಸುಮಾರು ಮೂವತ್ತು ಮೈಲಿ ದೂರದಲ್ಲಿ ಜಂಕಡವೆಂಬ ಹಳ್ಳಿಯಿದೆ. ಕನಕನವತೀಪಟ್ಟಣವೆಂಬ ಹೆಸರು ಈಗ ಮರೆತುಹೋಗಿದೆ. ಆದರೆ ಆ ಊರಿನ ಬಳಿ ಹರಿಯುತ್ತಿದ್ದಿತೆಂದು 'ವೃದ್ಧ ಮಾತಾ'ಎಂಬ ಸಂಸ್ಕೃತದ ಹೆಸರಿನಿಂದ ವರ್ಣಿಸಿರುವ ನದಿಯು ಈಗಲೂ ಹರಿಯುತ್ತಿದೆ. ಈಗ ಅದಕ್ಕೆ ಬುಧ್‌ನಾಯ್ ಎಂದು ಹೆಸರು. ಅದೇ ಕನಕನವತೀಪಟ್ಟಣವಾಗಿರ ಬೇಕೆಂಬುದಕ್ಕೆ ಇದು ಸ್ಪಷ್ಟವಾದ ಸೂಚನೆಯಾಗಿದೆ.

ಕವಿಗೆ ತಂದೆತಾಯಿಗಳು ಇಟ್ಟ ಹೆಸರು ಸಿದ್ಧೇಶ್ವರ. ಕವಿಯು ತನ್ನ ಮೊದಲ ಕೃತಿಯಾದ ವಿಲಂಕಾರಾಮಾಯಣದಲ್ಲಿ ತನ್ನನ್ನು ಹಾಗೆಂದೇ ಕರೆದುಕೊಂಡಿದ್ದಾನೆ ; ಆದರೆ ಆದರ ಮುಂದಿನ ಕೃತಿಗಳಲ್ಲೆಲ್ಲಾ ಆತನ ಹೆಸರು ಸರಳದಾಸ ಎಂದು ಕಂಡು ಬರುತ್ತದೆ. ಈ ವ್ಯತ್ಯಾಸಕ್ಕೆ ಕಾರಣಗಳನ್ನು ಕವಿಯೇ ಅನೇಕ ಸಲ ವಿವರಿಸಿದ್ದಾನೆ. ಆತನು ಸರಳಾದೇವಿಯ ಭಕ್ತನೂ ಸೇವಕನೂ ಆದುದರಿಂದ ಅತನು ಸರಳದಾಸನೆಂದು ಪ್ರಸಿದ್ಧನಾದನು.

ಕವಿಯ ಬಾಲ್ಯದ ಜೀವನದ ಬಗ್ಗೆ ನಮಗೆ ಏನೂ ತಿಳಿದಿಲ್ಲ. ಆದರೆ ಇತ್ತೀಚೆಗೆ

ಸೃಷ್ಟಿಯಾಗಿರುವ ಕೆಲವು ಲೇಖಕರಿಂದ ಪ್ರಸಿದ್ಧಿಗೆ ಬಂದ ಕೆಲವು ಕಲ್ಪಿತ ಕಥೆಗಳು ಆತನ ಬಾಲ್ಯದ ಸ್ಥಿತಿಗತಿಗಳನ್ನು ವಿವರಿಸಲು ಪ್ರಯತ್ನಮಾಡುತ್ತವೆ. ಈ ಕವಿಯು ತನ್ನ ಬಾಲ್ಯದಲ್ಲಿ ತುಂಬ ದಡ್ಡನಾಗಿದ್ದನೆಂದೂ ತನ್ನ ನೆನಪಿನಲ್ಲಿ ಏನೊಂದನ್ನು ಇಟ್ಟು ಕೊಳ್ಳಲು ಅಶಕ್ತನಾಗಿದ್ದನೆಂದೂ ಒಂದು ಕಥೆ ತಿಳಿಸುತ್ತದೆ. ಆತನ ತಂದೆ ರಾಮಾಯಣ ಮಹಾಭಾರತಗಳಲ್ಲಿ ಪರಿಣಿತನಾಗಿದ್ದುದರಿಂದ, ತನ್ನ ಎಲ್ಲ ಮಕ್ಕಳಿಗೂ ಆ ಕಥೆ ಗಳನ್ನು ಹೇಳುತ್ತಿದ್ದನಂತೆ. ಕೊನೆಯ ಮಗನಾದ ಸಿದ್ಧೇಶ್ವರ(ಸರಳದಾಸ) ನನ್ನು ಬಿಟ್ಟರೆ ಮಿಕ್ಕವರೆಲ್ಲ ಆ ಕಥೆಗಳನ್ನು ಚೆನ್ನಾಗಿ ನೆನಪಿನಲ್ಲಿಡುತ್ತಿದ್ದರು. ತಂದೆಗೆ ಕೋಪ ಬಂದು ಒಮ್ಮೆ ಕೊನೆಯ ಮಗನ ಮರೆವನ್ನೂ, ದಡ್ಡತನವನ್ನೂ ಕುರಿತು ಚೆನ್ನಾಗಿ ಬೈದನು. ಸಿದ್ಧೇಶ್ವರನು ಆ ಕಾರಣದಿಂದ ಮನೆಬಿಟ್ಟು ಸರಳಾದೇವಿಯ ದೇವಾಲಯಕ್ಕೆ ಓಡಿಹೋದನು. ಅಲ್ಲಿ ಅನೇಕ ದಿನಗಳನ್ನು ಉಪವಾಸದಲ್ಲಿಯೂ ದೇವತೆಯ ಪ್ರಾರ್ಥನೆ ಯಲ್ಲಿಯೂ ಕಳೆದನು. ಆದರಿಂದ ಸುಪ್ರೀತಳಾದ ದೇವತೆಯು ಆತನಿಗೆ ವರಪ್ರದಾನ ಮಾಡಿದಳು. ಕೊನೆಗೆ ಅವನು ತುಂಬ ಮೇಧಾವಿಯೂ ವಿವೇಕಿಯೂ ಜ್ಞಾಪಕಶಕ್ತಿ ಯುಳ್ಳವನೂ ಆಗಿ ಮನೆಗೆ ಹಿಂದಿರುಗಿದನು. ಇವುಗಳು ಆತನಿಗೆ ಕಾವ್ಯರಚನಾ ಶಕ್ತಿ ಯನ್ನು ಒದಗಿಸಿದವು. ಇನ್ನೊಂದು ಕಥೆಯ ಪ್ರಕಾರ ಸಿದ್ಧೇಶ್ವರನು ತನ್ನ ಬಾಲ್ಯದಲ್ಲಿ ತನ್ನ ತಂದೆಯ ಹೊಲದಲ್ಲಿ ಉಳುತ್ತಾ ಇಂಪಾಗಿ ಹಾಡಿಕೊಳ್ಳುತ್ತಿದ್ದನೆಂದೂ ಸರಳಾ ದೇವಿಯು ಅದನ್ನು ಕೇಳಿ ಸಂತೋಷಗೊಂಡು ಆತನಿಗೆ ಕಾವ್ಯರಚನಾಶಕ್ತಿಯನ್ನು ಕರು ಣಿಸಿಕೊಟ್ಟಳೆಂದೂ ತಿಳಿಯಬರುತ್ತದೆ. ಕವಿಯ ಕಾವ್ಯದಲ್ಲಿ ಕಂಡುಬರುವ ಆತನ ಜೀವನ ಚರಿತ್ರೆಯ ಘಟನೆಗಳಲ್ಲಿ ಈ ಹಿಂದೆ ಹೇಳಿದ ಯಾವ ಕಥೆಗೂ ಯಾವ ವಿಧವಾದ ಸಂಬಂಧವೂ ಸೂಚಿತವಾಗಿಲ್ಲ. ಇವು ಸರಳಾದೇವಿಯ ಮಹಿಮಾಶಕ್ತಿಯನ್ನು ಸ್ತುತಿ ಸುವ ಉದ್ದೇಶದಿಂದ ಅನಂತರ ಸೃಷ್ಟಿಯಾದವುಗಳೆಂಬುದು ಸ್ಪಷ್ಟ. ಇತರ ಭಾರತೀಯ ಕವಿಗಳ ಜೀವನದ ಬಾಲ್ಯಕ್ಕೆ ಸಂಬಂಧಿಸಿದಂತೆ ಇಂಥ ಕಥೆಗಳಿರುವುದು ವಾಚಕರಿಗೆಲ್ಲ ಗೊತ್ತಿದೆ. ಅದರಲ್ಲಿಯೂ ಮಹಾಕವಿ ಕಾಳಿದಾಸನು ತನ್ನ ಬಾಲ್ಯದಲ್ಲಿ ತುಂಬ ದಡ್ಡನೂ ಮಂಕನೂ ಆಗಿದ್ದನೆಂದೂ ಸರಸ್ವತಿಯ ಅನುಗ್ರಹದಿಂದ ಮಹಾಕವಿಯಾದನೆಂದೂ ತಿಳಿ ಸುವ ಕಥೆ ಸರ್ವವಿದಿತ. ಸರಳದಾಸನ ಬಾಲ್ಯಕ್ಕೆ ಸಂಬಂಧಿಸಿದ ಕಥೆಗಳು ಇಂಥವೇ; ಅವು ನಂಬಿಕೆಗೆ ಅರ್ಹವಲ್ಲ.

ಕವಿಯ ಕಾವ್ಯಗಳಲ್ಲಿ ಕಂಡುಬರುವ ಅವನ ಜೀವನ ಘಟನೆಗಳ ಸೂಚನೆಗಳು ಅನೇಕವಾಗಿದ್ದರೂ ಅವುಗಳಿಂದ ಅವನ ಜೀವನದ ಪೂರ್ಣ ಚಿತ್ರವನ್ನಾಗಲೀ ಅಪೂರ್ಣ ಚಿತ್ರವನ್ನಾಗಲಿ ಕಲ್ಪಿಸುವುದು ಅಸಾಧ್ಯ. ಅನೇಕವೇಳೆ ಅವೆಲ್ಲವೂ ಒಂದೇ ಬಗೆಯ ವಾಗಿದ್ದು ಅನೇಕ ದೇವತಾಪಾರ್ಥನೆಗಳಲ್ಲಿ ಮುಖ್ಯವಾಗಿ ಸರಳಾದೇವಿಯನ್ನು ಕುರಿತ ಪ್ರಾರ್ಥನೆಯಲ್ಲಿ ಲೀನವಾಗಿ ಹೋಗಿವೆ. ಇಂಥ ಸಂದರ್ಭಗಳನ್ನು ಎಚ್ಚರಿಕೆಯಿಂದ ಪರಿ ಶೀಲಿಸಿ ಕವಿಯ ಜೀವನದ ಬಗ್ಗೆ ಕೆಲವು ಅಂಶಗಳನ್ನು ಹೊರತೆಗೆಯಬಹುದು. ದ್ರೋಣ ಪರ್ವದ ಒಂದು ಪದ್ಯದಲ್ಲಿ ತನ್ನನ್ನು ಯಶೋವಂತನ ಮಗನೆಂದೂ ಮಧ್ಯಪರ್ವದ

ಮತ್ತೊಂದು ಪದ್ಯದಲ್ಲಿ ಪರಶುರಾಮನ ತಮ್ಮನೆಂದೂ ವರ್ಣಿಸಿ ಕೊಂಡಿದ್ದಾನೆ. ಲೆಕ್ಕವಿಲ್ಲದಷ್ಟು ಸಲ, ತಾನು ವಿದ್ಯಾಭ್ಯಾಸ ಮಾಡಿದವನಲ್ಲವೆಂದೂ, ಒಂದು ಹಳ್ಳಿಯ ಮಠಕ್ಕೆ ಹೋಗುವ ಅವಕಾಶವೂ ತನಗೆ ಸಿಕ್ಕಲಿಲ್ಲವೆಂದೂ ಹೇಳಿಕೊಂಡಿದ್ದಾನೆ. ಅವನ ತಂದೆಯೂ ಸಂಸಾರದ ಇತರರೂ ತನ್ನಂತೆಯೇ ಅವಿದ್ಯಾವಂತರೆಂದೂ ವಿದ್ವಾಂಸರೊಡನೆ ಆದರಲ್ಲಿಯೂ ಅಗ್ರಹಾರದ ಬ್ರಾಹ್ಮಣರೊಡನೆ ಓಡಾಡುವ ಅವಕಾಶವು ತನಗೆ ದೊರಕಲಿಲ್ಲವೆಂದೂ ಹೇಳಿದ್ದಾನೆ. ತನ್ನನ್ನು ಶೂದ್ರನೆಂದು ಕರೆದು ಕೊಂಡಿದ್ದಾನೆ; ಉದ್ಯೋಗದಲ್ಲಿ ಆರಂಬಗಾರನೆಂದೂ ಹೇಳಿದ್ದಾನೆ. ಅವನ ಚಂಡೀಪುರಾಣದಲ್ಲಿ ತನ್ನ ಮುದಿತನದಲ್ಲಿಯೂ ತನ್ನ ಜಮೀನನ್ನು ತಾನೇ ಉಳುತ್ತಿದ್ದನೆಂದು ಹೇಳಿರುವುದು ತಿಳಿಯಬರುತ್ತದೆ. ಅವನ ಮಹಾಭಾರತದ ದ್ರೋಣಪರ್ವದಲ್ಲಿ ಅವನಿಗೆ ಮಕ್ಕಳೂ ಮೊಮ್ಮಕ್ಕಳೂ ಇದ್ದರೆಂದೂ ತನ್ನ ಸ್ವಂತ ಗದ್ದೆಯಿಂದ ತನ್ನ ಬದುಕಿಗೆ ಸಾಕಷ್ಟನ್ನು ಸಂಪಾದಿಸುತ್ತಿದ್ದನೆಂದೂ ತಿಳಿಯಬರುತ್ತದೆ.

ಈ ಕೆಲವು ಅಂಶಗಳನ್ನು ಬಿಟ್ಟರೆ ಕವಿಯ ಜೀವನದ ಬಗ್ಗೆ ನಮಗೆ ಮತ್ತೇನೂ ತಿಳಿಯಬರುವುದಿಲ್ಲ. ಕಥಾನಿರೂಪಣೆಗೆ ಅನಗತ್ಯವಾದ ಅನೇಕ ವಿಷಯಾಂತರಗಳನ್ನೂ ಕಾವ್ಯಶೋಭಾಕರಧರ್ಮಗಳನ್ನೂ ಅಧಿಕವಾಗಿ ದೀರ್ಘವಾಗಿ ಸೇರಿಸುವುದರಲ್ಲಿ ಕವಿ ಆಸಕ್ತನಾಗಿದ್ದರೂ, ತನ್ನ ಸ್ವಂತ ಜೀವನದ ಬಗ್ಗೆ ವಿವರಗಳನ್ನು ನೀಡುವುದರಲ್ಲಿ ತುಂಬ ಜಿಪುಣನಂತೆ ವರ್ತಿಸಿದ್ದಾನೆ. ಕವಿಯ ಆತ್ಮಚರಿತ್ರೆಗೆ ಸಂಬಂಧಿಸಿದ ವಿವರಗಳಿಂದ ಹೊರತೆಗೆದಷ್ಟನ್ನು ಅವನ ನಿಜವಾದ ಬದುಕಿಗೆ ಸಂಬಂಧಪಟ್ಟದ್ದೆಂದು ನಂಬಹುದು. ಅವನ ವಿನೀತಭಾವದಲ್ಲಿ ಅವುಗಳ ಚಿತ್ರಣದಲ್ಲಿ ಸ್ವಲ್ಪ ಉತ್ಪ್ರೇಕ್ಷೆಯಿದ್ದಿರಬಹುದು. ಅವನ ಕಾಲದಲ್ಲಿ ವಿದ್ಯಾಭ್ಯಾಸದ ಅವಕಾಶವೇ ಅಷ್ಟು ಕಡಮೆಯಾಗಿದ್ದಾಗ ವ್ಯವಸಾಯಗಾರನ ಮಗನಿಗೆ ಯಾವ ವಿಧವಾದ ಶಿಕ್ಷಣ ದೊರಕುವುದೂ ಅಸಾಧ್ಯವಾಗಿತ್ತು. ಅವನು ಶೂದ್ರನಾಗಿದ್ದುದರಿಂದ ಬ್ರಾಹ್ಮಣರ ಅಗ್ರಹಾರಗಳಲ್ಲಿ ಸ್ಥಾಪಿತವಾಗಿದ್ದ ಸಂಸ್ಕೃತಶಾಲೆಗಳಲ್ಲಿ ಅವನಿಗೆ ಪ್ರವೇಶದೊರಕುವುದೂ ಅಷ್ಟೇ ಅಸಾಧ್ಯವಾಗಿತ್ತು. ಅವನ ಬಾಲ್ಯ ವಿದ್ಯಾಭ್ಯಾಸದ ಬಗ್ಗೆ ಕವಿ ಹೇಳಿರುವುದು ಈ ಕಾರಣದಿಂದ ಸತ್ಯವೆಂದು ನಂಬಬಹುದು. ಆದರೆ ಪ್ರತಿಭಾಶಾಲಿಯಾದ ಮನುಷ್ಯನಿಗೆ ಅವನ ಸುಪ್ತ ಜೀವನವನ್ನು ವೃದ್ಧಿಗೊಳಿಸುವುದಕ್ಕೆ ಒಂದು ಶಿಕ್ಷಣವ್ಯವಸ್ಥೆಯೂ ಸಹಾ ಅಗತ್ಯವಲ್ಲವೆಂಬುದನ್ನು ನಾವು ನೆನಪಿನಲ್ಲಿಡಬೇಕು. ಅನೇಕ ವೇಳೆ ಅಂಥವನು ಸ್ವಶಿಕ್ಷಿತನಾಗಿರುತ್ತಾನೆ; ಅವನ ಕಣ್ಣುಗಳು, ಕಿವಿಗಳು, ಕಲ್ಪನಾಶಕ್ತಿ, ಅನುಭವ ಮತ್ತು ಈ ವಿಸ್ತಾರವಾದ ಪ್ರಪಂಚ—ಇವೇ ಅವನ ಗುರುಗಳು. ಸರಳದಾಸನು ಇಂಥ ಸ್ವಶಿಕ್ಷಿತ ಮನುಷ್ಯ.

ಸ್ವಂತವಾದ ಕಲಿಕೆಯಿಂದಲೂ ಸತತ ಪ್ರಯತ್ನದಿಂದಲೂ ಕವಿಯು ಗಳಿಸಿದ ಸಾಮರ್ಥ್ಯವೆಲ್ಲವೂ ತನ್ನ ಸ್ಫೂರ್ತಿಯೂ ಆರಾಧ್ಯ ದೇವತೆಯೂ ಆದ ಸರಳಾದೇವಿಯ ಕೃಪೆಯಿಂದ ಬಂದಿತೆಂದು ಕವಿಯು ಬಗೆದಿದ್ದನು, ಅಲ್ಲದೆ ತಾನು ರಚಿಸಿದ ಯಾವುದಕ್ಕೂ ತನ್ನ ಹಿರಿಮೆ ಕಾರಣವೆಂದು ಹೇಳಿಲ್ಲ. ತಾನು

ಪುಸ್ತಕ ರೂಪದಲ್ಲಿ ಬರೆದಿರುವುದೆಲ್ಲವೂ ತನಗೆ ರಾತ್ರಿಯ ವೇಳೆ ಸರಳಾದೇವಿಯು ಹೇಳಿದುದೆಂದೂ ಅದು ತಾನು ಬೆಳಗಿನ ಹೊತ್ತು ಬರವಣಿಗೆಗೆ ಇಳಿಸಿದುದೆಂದೂ ನಾವು ನಂಬಬೇಕೆಂದು ಅನೇಕ ವೇಳೆ ಹೇಳಿದ್ದಾನೆ. ಕವಿಯ ವ್ಯಕ್ತಿತ್ವದಲ್ಲಿ ವಿನೀತಭಾವವೂ ಗಾಢವಾದ ಧರ್ಮಬುದ್ಧಿಯೂ ಎಷ್ಟರಮಟ್ಟಿಗೆ ತುಂಬಿಕೊಂಡಿದೆಯೆಂದರೆ, ಆತನ ವ್ಯಕ್ತಿತ್ವವನ್ನು ಬೇರ್ಪಡಿಸಿ ಖಚಿತವಾಗಿ ನಿರೂಪಿಸುವುದು ನಿಜವಾಗಿ ಅಸಾಧ್ಯವಾಗಿದೆ. ಅವನ ಎಲ್ಲ ಗ್ರಂಥಗಳಲ್ಲಿ ವ್ಯಾಪಕವಾಗಿರುವ ದೈವಸ್ತುತಿಗಳು, ಭಾವಪೂರ್ಣವಾದ ಗೀತಗಳು. ಅನೇಕ ದೇವತೆಗಳನ್ನು ಕುರಿತ ಪ್ರಾರ್ಥನೆಗಳು ಅದರಲ್ಲಿಯೂ ಸರಳಾದೇವಿಯ ಮೇಲಿನ ಸ್ತೋತ್ರಗಳು—ಇವು ಎಷ್ಟು ವಿಸ್ತಾರವಾಗಿವೆಯೆಂದರೆ ಅವುಗಳಷ್ಟನ್ನೇ ಬೇರೆಯಾಗಿ ಒಟ್ಟುಗೂಡಿಸಿದರೆ ಅದು ಒಂದು ಬೃಹದ್ಗ್ರಂಥವೇ ಆಗುತ್ತದೆ. ಇವುಗಳನ್ನು ಬರೆಯುವಾಗ ಕವಿಯು ತನ್ನ ಸಾಮರ್ಥ್ಯದ ತುತ್ತತುದಿಯಲ್ಲಿದ್ದು, ಕಲ್ಪನೆ ಗಾಢವಾಗಿದ್ದು ಭಾಷೆಯು ಅತ್ಯುತ್ತಮ ಶೈಲಿಯನ್ನು ಸಂಪಾದಿಸಿಕೊಂಡಿದ್ದು—ಈ ಮೂರೂ ಮುಪ್ಪುರಿಗೊಂಡಂತಿದೆ.

ತನ್ನ ಆರಾಧ್ಯ ದೇವತೆಯೇ ಎಲ್ಲ ಜ್ಞಾನದ ಮತ್ತು ಸ್ಫೂರ್ತಿಯ ನೆಲೆಯೆಂದು ನಂಬಿ ಆ ದೇವತೆಗೆ ಸಂಪೂರ್ಣವಾಗಿ ಶರಣು ಹೋಗುವುದು ಸರಳದಾಸನ ಮತ್ತು ಅವನ ಸಮಕಾಲೀನರಾದ ಎಲ್ಲ ಕವಿಗಳ ಪದ್ಧತಿಯಾಗಿತ್ತು. ಹದಿನಾರನೆಯ ಶತಮಾನದ ಮಧ್ಯಭಾಗದಿಂದ ಹಿಂದಿನ ಕವಿಗಳೆಲ್ಲ, ತಮ್ಮ ಕಾವ್ಯಗಳಲ್ಲಿ ತಮ್ಮನ್ನು 'ದಾಸ' ಎಂದು ಕರೆದುಕೊಂಡಿದ್ದಾರೆ. 'ದಾಸ' ಎಂದರೆ ಆಳು, ಸೇವಕ ಎಂದರ್ಥ: ಒಬ್ಬ ದೇವತೆಯ ಭಕ್ತನೆಂದೇ ಅದರ ಅರ್ಥ. ಹೀಗಾಗಿ ಸರಳದಾಸನ ಕಾಲಕ್ಕೆ ಹಿಂದೆಯೂ ಮುಂದೆಯೂ 'ದಾಸ' ಎಂದು ಕೊನೆಯಾಗುವ ಅನೇಕ ಕವಿಗಳ ಸಾಲೇ ಇದೆ; ಉದಾ : ವತ್ಸದಾಸ, ಮಾರ್ಕಂಡದಾಸ, ಸರಳದಾಸ, ಜಗನ್ನಾಥದಾಸ, ಬಲರಾಮದಾಸ, ಯಶೋವಂತದಾಸ, ಇತ್ಯಾದಿ. ಇವರಲ್ಲಿ ಯಾರೂ ತಮ್ಮ ಜಾತಿಯನ್ನು ಸೂಚಿಸುವ ಹೆಸರನ್ನು ಪಡೆದಿಲ್ಲ. ಈ ಕವಿಗಳು ತಮ್ಮ ಗ್ರಂಥಗಳಲ್ಲಿ ತಮ್ಮನ್ನು ಅವಿದ್ಯಾವಂತರೆಂದೂ ಅಜ್ಞಾನಿಗಳೆಂದೂ ನಿರ್ಗತಿಕರೆಂದೂ ಮುಂತಾಗಿ ಹೇಳಿಕೊಂಡು ತಮ್ಮ ಅಧಿಕವಾದ ವಿನಯವನ್ನು ವ್ಯಕ್ತಪಡಿಸಿದ್ದಾರೆ. ತಮ್ಮ ಕಾರ್ಯಗಳನ್ನು ತಾವು ಒಟ್ಟು ಪ್ರಪಂಚದ, ಎಲ್ಲ ಜನರ, ಎಲ್ಲ ಪ್ರಾಣಿಗಳ ಒಳಿತಿಗಾಗಿ ರಚಿಸಿರುವುದಾಗಿಯೂ ಸ್ಪಷ್ಟವಾಗಿ ತಿಳಿಸಿದ್ದಾರೆ. ಮತೀಯ ಕ್ಷೇತ್ರದಲ್ಲಿಯೂ ಸಾಹಿತ್ಯ ಕ್ಷೇತ್ರದಲ್ಲಿಯೂ ವಿನಯವೆನ್ನುವುದು ಆ ಕಾಲದ ಪದ್ಧತಿಯಾಗಿತ್ತು. ಸರಳದಾಸನು ಇದನ್ನು ಅಧಿಕವಾದ ಪ್ರಮಾಣದಲ್ಲಿ ವ್ಯಕ್ತಪಡಿಸಿದ್ದಾನೆ.

ಈ ಕವಿಯ ಮೊದಲನೆಯ ಕಾವ್ಯವಾದ ವಿಲಂಕಾರಾಮಾಯಣವೊಂದನ್ನು ಬಿಟ್ಟು ಮಿಕ್ಕೆಲ್ಲ ಕಾವ್ಯಗಳಲ್ಲಿಯೂ ಕವಿಯ ಹೆಸರಿನ ಹಿಂದೆ 'ಶೂದ್ರಮುನಿ' ಎಂಬ ವಿಶೇಷಣ ಸೇರಿದೆ. ಈ ವಿಶೇಷಣದ ಎರಡನೆಯ ಪದಕ್ಕೆ ಧರ್ಮಗ್ರಂಥಗಳನ್ನು ರಚಿಸಿದವನು ಎಂದರ್ಥ. ದೇವತಾಪುರುಷರೂ ಅರ್ಧದೇವತಾ ಪುರುಷರೂ ಹೊಂದಿರುವ ಗುಣಗಳನ್ನು ಪಡೆದು ಜನಿಸಿದ ಮಾನವರು, ವಿವಿಧ ಕಾರ್ಯಕ್ಷೇತ್ರಗಳಲ್ಲಿ ಸಮರ್ಥ

ರಾಗುತ್ತಾರೆಂದು ಸರಳದಾಸನು ಹೇಳಿದ್ದಾನೆ. ಕುಬೇರ, ಸಹದೇವ, ನಕುಲ, ಯಮ, ಪ್ರಹ್ಲಾದ ಮತ್ತು ಮುನಿ—ಈ ವ್ಯಕ್ತಿಗಳ ಗುಣಗಳನ್ನು ಹೊಂದಿ ಜನಿಸಿದವರು ಕ್ರಮವಾಗಿ ಸಿರಿವಂತರೂ, ವಿವೇಕಿಗಳೂ, ತುರಗವಿದ್ಯಾಪ್ರವೀಣರೂ, ಆತ್ಮತೃಪ್ತರೂ, ವೈಷ್ಣವರೂ, ಧರ್ಮಗ್ರಂಥಗಳ ರಚಯಿತರೂ ಆಗುತ್ತಾರೆಂದು ಅವನ ಭಾವನೆ. ಅವನು ಮುನಿಯ ಗುಣಗಳಿಂದ ಜನಿಸಿದನೆಂದೂ ಆದುದರಿಂದ ಸರಳಾದೇವಿಯ ಆದೇಶದಂತೆ ಶೂದ್ರಮುನಿಯಾದನೆಂದೂ ನಾವು ನಂಬಬೇಕೆಂದು ಅವನು ತಿಳಿಸುತ್ತಾನೆ. ಒರಿಯಾ ಭಾಷೆಯಲ್ಲಿ ಒರಿಸ್ಸಾ ದೇಶದಲ್ಲಿಯೇ ಧರ್ಮಗ್ರಂಥಗಳನ್ನು ಬರೆದ ಮೊದಲನೆಯವನು ಒಬ್ಬ ಶೂದ್ರ, ಸರಳದಾಸನೆಂಬುದನ್ನು ನಾವು ಗಮನಿಸಬೇಕು. ಆತನಿಗಿಂತ ಹಿಂದೆ ಸಂಸ್ಕೃತದಲ್ಲಿ ಧರ್ಮಗ್ರಂಥಗಳನ್ನು ರಚಿಸಿದ್ದವರೆಲ್ಲ ಬ್ರಾಹ್ಮಣ ರಾಗಿದ್ದರು. ಈ ಬ್ರಾಹ್ಮಣ ಮುನಿಗಳಿಂದ ತನ್ನನ್ನು ಬೇರ್ಪಡಿಸಿಕೊಳ್ಳಲು ಕವಿಯು 'ಶೂದ್ರಮುನಿ' ಎಂಬ ಹೆಸರನ್ನಿಟ್ಟುಕೊಂಡನು.

ಒರಿಯ ಸಾಹಿತ್ಯದ ನಿರ್ಮಾಪಕನೆಂದೂ ಒರಿಯ ಭಾಷೆಯಲ್ಲಿ ಧರ್ಮಗ್ರಂಥ ಗಳನ್ನು ಮೊದಲು ಬರೆದವನೆಂದೂ ತನಗೆ ಬರಬಹುದಾದ ಕೀರ್ತಿಯನ್ನು ಆತನು ಒಪ್ಪಿ ಕೊಳ್ಳಲು ಸಿದ್ಧನಾಗಿರಲಿಲ್ಲವೆಂಬುದನ್ನು ನಾವೀಗಾಗಲೇ ಕಂಡಿದ್ದೇವೆ. ಆತನ ಪ್ರಕಾರ 'ಶೂದ್ರಮುನಿ' ಎಂಬ ಹೆಸರು ಕೂಡ ಅವನಿಗೆ ಸರಳಾದೇವಿಯಿಂದ ಬಂದಿತೇ ಹೊರತು ಯಾವ ಮಾನವನಿಂದಲೂ ಅಲ್ಲ. ಈ ವಿನಯವಂತಿಕೆಗೆ ಕಾರಣ ಆಗಿನ ಕಾಲದಲ್ಲಿದ್ದ ಸಾಮಾಜಿಕ ದೃಷ್ಟಿ ಮತ್ತು ಕವಿಯ ಗಾಢವಾದ ಧರ್ಮದೃಷ್ಟಿ ಎಂಬುದನ್ನು ಹಿಂದೆಯೇ ಹೇಳಿದೆ. ಅಲ್ಲದೆ ಈ ವಿಧವಾಗಿ ಕವಿಯು ಸ್ವಂತ ಅಸಾಮರ್ಥ್ಯವನ್ನು ಸಾಧಿಸುವುದಕ್ಕೆ ಇತರ ಕೆಲವು ಐಹಿಕ ಕಾರಣಗಳೂ ಇದ್ದುವೆಂದು ತೋರುತ್ತದೆ. ಅನೇಕ ದೃಷ್ಟಿಗಳಿಂದ ಸರಳದಾಸನ ಬರಹವು ಕ್ರಾಂತಿಕಾರಿಯಾದುದು. ಆತನು ಬರುವ ತನಕ ಒರಿಸ್ಸಾ ದೇಶ ದಲ್ಲಿ ಎಲ್ಲ ಧರ್ಮಗ್ರಂಥಗಳೂ ಸಂಸ್ಕೃತದಲ್ಲಿದ್ದುವು ; ಎಲ್ಲ ಲೇಖಕರೂ ಬ್ರಾಹ್ಮಣರಾಗಿ ದ್ದರು. ಸರಳದಾಸನು ಹಿಂದೂ ಸಮಾಜದ ವರ್ಣಾಶ್ರಮ ಧರ್ಮದ ನಾಲ್ಕನೆಯ ಪಂಗಡಕ್ಕೆ ಸೇರಿದ ಶೂದ್ರನಾಗಿದ್ದನು ; ಅಲ್ಲದೆ ಧರ್ಮಗ್ರಂಥಗಳನ್ನು ಪ್ರಾಂತೀಯ ಭಾಷೆಯಲ್ಲಿ ರಚಿಸಿದನು. ಪ್ರಾಚೀನ ಕಾಲದಿಂದಲೂ ಗೌರವಿಸಲಾಗುತ್ತಿದ್ದ ಪದ್ಧತಿಯಂತೆ ಅತಿ ಪ್ರಾಚೀನವಾದ ವಿಷಯಗಳನ್ನು ಮಾತ್ರ ಕುರಿತು ಧರ್ಮಗ್ರಂಥಗಳಲ್ಲಿ ಹೇಳಬೇಕಾ ಗಿತ್ತು. ಆದರೆ, ಸರಳದಾಸನು ತನ್ನ ಮಹಾಭಾರತದಲ್ಲಿ ಸಮಕಾಲೀನವಾದ ಘಟನೆ ಗಳನ್ನು ಇತ್ತೀಚಿನ ಘಟನೆಗಳನ್ನೂ ಮಹಾಭಾರತಕ್ಕೆ ಸಂಬಂಧಿಸಿದ ಅನೇಕ ಐಹಿಕ ವಿಚಾರಗಳನ್ನೂ ಹೇಳಿರುವುದನ್ನು ಮುಂದೆ ಹೇಳಲಾಗುತ್ತದೆ. ಒರಿಯ ಮಹಾಭಾರತ ವನ್ನು ಬರೆಯುವವನು ಸಂಸ್ಕೃತ ಮಹಾಭಾರತವನ್ನು ಅನುವಾದ ಮಾಡಬೇಕಾಗಿತ್ತು ಅಥವಾ ಅದನ್ನು ಅಧಿಕವಾಗಿ ಅನುಸರಿಸಬೇಕಾಗಿತ್ತು. ಆದರೆ ಅವನು ಈ ಎರಡನ್ನೂ ಮಾಡಿಲ್ಲ. ಸಂಸ್ಕೃತ ಮಹಾಭಾರತದ ಬಹಿರಂಗದ ರೂಪವನ್ನು ತೆಗೆದುಕೊಂಡು ಅದರೊಳಗಿನ ಅನೇಕ ವಿಷಯಗಳನ್ನು ಬಿಟ್ಟು, ಅದರಿಂದ ಬೇರೆಯಾದ

ಅನೇಕ ಸ್ವಂತ ಸೃಷ್ಟಿಗಳನ್ನು ಸೇರಿಸಿ ಕವಿಯು ತನ್ನ ಮಹಾಭಾರತವನ್ನು ರಚಿಸಿದ್ದಾನೆ. ಇಂಥ ದಿಟ್ಟ ಶೂದ್ರನ ಬರಹದಲ್ಲಿ ತುಂಬಿದ್ದ ಕ್ರಾಂತಿಕಾರಕ ಭಾವನೆಗಳನ್ನು ಕುರಿತು ಧರ್ಮಗ್ರಂಥಗಳಲ್ಲಿ ಪರಿಣತರಾದ ಬ್ರಾಹ್ಮಣರಿಂದ ಕಟುವಾದ ವಿರೋಧ ವ್ಯಕ್ತವಾಗಿದ್ದಿರಬೇಕು. ಈ ವಿರೋಧ ವಿಮರ್ಶೆಯಿಂದ ತನ್ನನ್ನು ರಕ್ಷಿಸಿಕೊಳ್ಳಲು ಕವಿಯು ತನ್ನೆಲ್ಲ ಬರಹಗಳೂ ಸರಳಾದೇವಿಯ ಮುಖದಿಂದಲೇ ಬಂದುವೆಂದು ಹೇಳಿ ಎಲ್ಲ ಗ್ರಂಥಗಳನ್ನೂ ಆ ದೇವತೆಗೆ ಅರ್ಪಿಸಿದ್ದಾನೆ.

ಈ ಕವಿಯು ತನ್ನ ಪ್ರಾಯದಲ್ಲಿ ಒರಿಸ್ಸಾದೇಶದ ಗಜಪತಿರಾಜರ ಸೈನ್ಯದಲ್ಲಿ ಒಬ್ಬ ಸೈನಿಕನಾಗಿದ್ದಂತೆ ಕಂಡುಬರುತ್ತದೆ. ಗಂಗರ ಮತ್ತು ಸೂರ್ಯವಂಶಿ ರಾಜರ ಆಡಳಿತದಲ್ಲಿ ಒರಿಸ್ಸಾ ದೇಶದಲ್ಲಿ ಎಲ್ಲ ಜಾತಿಗಳವರಿಗೂ ಎಲ್ಲ ವರ್ಗಗಳವರಿಗೂ ಸೈನಿಕ ಶಿಕ್ಷಣವು ಕಡ್ಡಾಯವಾಗಿತ್ತು. ಬ್ರಾಹ್ಮಣರಿಗೆ ಮಾತ್ರ ಅದರಿಂದ ವಿನಾಯಿತಿಯಿತ್ತು; ಆದರೆ, ಅನೇಕ ಶಾಸನಗಳು ಸಾಕ್ಷ್ಯ ಒದಗಿಸುವಂತೆ ಬ್ರಾಹ್ಮಣರೂ ಕೂಡ ಒರಿಸ್ಸಾ ಸೈನ್ಯದಲ್ಲಿ ಕೆಲವು ವೇಳೆ ಸೇನಾಪತಿಯ ಸ್ಥಾನವನ್ನು ವಹಿಸುತ್ತಿದ್ದರು. ಸೈನಿಕ ಶಿಕ್ಷಣವೆನ್ನುವುದು ಅತ್ಯಗತ್ಯವೆಂಬ ಭಾವನೆ, ಸಮಾಜದಲ್ಲೆಲ್ಲ ರೂಢಮೂಲವಾಗಿತ್ತು; ಬೇಸಾಯಗಾರರಿಂದ ತುಂಬಿದ್ದ ಸ್ವದೇಶೀ ಸೈನ್ಯವೇ ಗಜಪತಿ ರಾಜರ ಸೈನ್ಯದಳದ ಪ್ರಮುಖಭಾಗವಾಗಿತ್ತು. ಬ್ರಾಹ್ಮಣರಿಂದ ಹಿಡಿದು ತಮಟೆ ಹೊಡೆಯುವ ಹೊಲೆಯರವರೆಗೆ ಎಲ್ಲ ಜಾತಿಗಳವರಲ್ಲಿಯೂ ಈ ಹಿಂದೂ ರಾಜರಿಂದ ಬಂದಿದ್ದ ಸೈನ್ಯದ ಬಿರುದು ಬಾವಲಿಗಳ ಬಗ್ಗೆ ಇಂದು ಒರಿಸ್ಸಾ ಪ್ರಾಂತದಲ್ಲಿ ಅವಶೇಷಗಳು ಕಾಣಬರುತ್ತವೆ. ರಾಜ್ಯದ ರಕ್ಷಣೆಯಾಗಲೀ, ರಾಜ್ಯವಿಸ್ತಾರವಾಗಲೀ ಒರಿಸ್ಸಾ ಪ್ರಾಂತದಲ್ಲಿ ಒಟ್ಟು ಪ್ರಜೆಗಳ ಕರ್ತವ್ಯವಾಗಿತ್ತಲ್ಲದೆ ಯಾವೊಂದು ಜಾತಿ ಅಥವಾ ಕೆಲವು ಜಾತಿಗಳ ಭಾರವಾಗಿರಲಿಲ್ಲ. ಈ ವಿಧವಾದ ರಾಷ್ಟ್ರೀಯ ಸೈನಿಕ ಪದ್ಧತಿ ಇದ್ದುದರಿಂದಲೇ ಕ್ರಿ. ಶ. 1568 ರವರೆಗೂ, ಭಾರತದಲ್ಲಿ ಒರಿಸ್ಸಾ ಪ್ರಾಂತದ ಅಕ್ಕಪಕ್ಕದ ಪ್ರದೇಶಗಳೂ ಮಹಮ್ಮದೀಯರ ಧಾಳಿಗೆ ಒಳಗಾಗಿ ಅವರ ಆಳ್ವಿಕೆಗೆ ಸೇರಿಕೊಳ್ಳುವವರೆಗೂ, ಸ್ವತಂತ್ರವಾಗಿ ಉಳಿಯುವುದು ಸಾಧ್ಯವಾಗಿದ್ದಿರಬೇಕು. ಸರಳದಾಸನ ಸಮಕಾಲೀನನಾದ ಕಪಿಲೇಶ್ವರನ ಆಡಳಿತ ಕಾಲದಲ್ಲಿ, ಒರಿಸ್ಸಾ ರಾಜ್ಯವು ಉತ್ತರದಲ್ಲಿ ಗಂಗಾನದಿಯಿಂದ ಹಿಡಿದು ದಕ್ಷಿಣದಲ್ಲಿ ಕಾವೇರೀ ನದಿಯವರೆಗೆ ವಿಸ್ತಾರಗೊಂಡ ರಾಜ್ಯವಾಗಿದ್ದುದರಿಂದ, ಇಂಥ ಸೈನ್ಯಪದ್ಧತಿಯು ತೀವ್ರವಾಗಿರುವುದಕ್ಕೆ ಅಧಿಕವಾದ ಕಾರಣಗಳೂ ಇದ್ದುವು.

ಅವನ ಕಾಲದಲ್ಲಿದ್ದ ಕಡ್ಡಾಯ ಸೈನಿಕ ಸೇವೆಯಿಂದ ಸರಳದಾಸನು ವಿನಾಯಿತಿ ಪಡೆದಿದ್ದನೆಂದು ತಿಳಿಯಲು ಯಾವ ಕಾರಣವೂ ಇಲ್ಲ. ಅದಕ್ಕೆ ಪ್ರತಿಯಾಗಿ ಆತನ ಕಾವ್ಯಗಳಲ್ಲಿಯೇ ಅನೇಕ ಯುದ್ಧಗಳ, ಕದನಗಳ ವಿವರಣೆಗಳು ನೆನಪುಗಳಿದ್ದಂತೆ ಕಂಡುಬರುತ್ತವೆ. ಅವುಗಳಲ್ಲಿ ಕವಿಯೇ ಯುವಕನಾಗಿದ್ದಾಗ ತಾನು ಸೈನಿಕನಾಗಿದ್ದನೆಂದು ಎಲ್ಲಿಯೂ ಹೇಳಿರದಿದ್ದರೂ ಹಾಗೆ ಯುದ್ಧದಲ್ಲಿ ಭಾಗವಹಿಸಿರುವುದು ಸಾಧ್ಯವೆಂದು ಕಂಡುಬರುತ್ತದೆ. ಹಿಂದೆಯೇ ತನ್ನ ಜೀವನದ ವಿಚಾರದಲ್ಲಿ ಪ್ರಾಸಂಗಿಕವಾಗಿ ಕೆಲವು

ವಿಷಯಗಳನ್ನು ಹೇಳಿದ್ದಾನಲ್ಲದೆ, ಎಲ್ಲಿಯೂ ತನ್ನ ಬಾಳಿನ ಅಲ್ಪಾಂಶದ ಚಿತ್ರ ವನ್ನಾದರೂ ಪ್ರಯತ್ನಪೂರ್ವಕವಾಗಿ ತಿಳಿಸಿಲ್ಲ. ಆದುದರಿಂದ ಅವನ ಸೈನಿಕ ಜೀವನದ ಬಗ್ಗೆ ಆತನ ಮೌನವನ್ನೂ ನಾವು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು.

ಆದರೂ ಕವಿಯ ಕಾವ್ಯಗಳಲ್ಲಿ ಕಂಡುಬರುವ ಯುದ್ಧಗಳ ಮತ್ತು ಕದನಗಳ ವರ್ಣನೆಯಿಂದ ಆತನಿಗೆ ಯುದ್ಧಗಳು ಚೆನ್ನಾಗಿ ಪರಿಚಯವಾಗಿದ್ದವೆಂಬುದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಯುದ್ಧದ ದೃಶ್ಯಗಳನ್ನು ತುಂಬ ವಿವರವಾಗಿ ಆತನು ಚಿತ್ರಿಸುತ್ತಾನೆ; ಅಲ್ಲದೆ ಯುದ್ಧದ ಆಯುಧಗಳು, ಯುದ್ಧಗಳಲ್ಲಿ ಉಪಯೋಗಿಸು ತ್ತಿದ್ದ ರಣವಾದ್ಯಗಳು, ಸೈನಿಕರೂ ದಳಪತಿಗಳೂ ಧರಿಸುತ್ತಿದ್ದ ಸಮವಸ್ತ್ರಗಳು, ಬಗೆಬಗೆಯ ಯುದ್ಧದ ಕುದುರೆಗಳು ಮುಂತಾದುವುಗಳ ಬಹುಶಃ ಸಂಪೂರ್ಣವಾದ ಪಟ್ಟಿಯನ್ನೇ ಕೊಟ್ಟಿದ್ದಾನೆ. ಖುರಾಸಾನಿ, ಅಂದರೆ ಪರ್ಷಿಯದ ಒಂದು ಪ್ರಾಂತವಾದ ಖುರ್‌ಸ್ತಾನ್ ಮತ್ತು ಪರಸ, ಅಂದರೆ ಪರ್ಷಿಯಾ ದೇಶ – ಇವುಗಳಿಂದ ಆಮದಾದ ಕುದುರೆಗಳ ಬಗ್ಗೆ ಬರೆದಿರುವುದು ವಾಚಕರ ಆಸಕ್ತಿಯನ್ನು ಕೆರಳಿಸುತ್ತದೆ. 'ಕಲಪಿ' ಎಂದರೆ ಉತ್ತರ ಪ್ರದೇದ ಕಲ್ಪಿ ಎಂಬ ಪ್ರದೇಶದ ಸುತ್ತಮುತ್ತ ಸಾಕುವ ಸ್ವದೇಶೀ ಕುದುರೆಗಳ ಬಗ್ಗೆಯೂ ಹೇಳುತ್ತಾನೆ. ಮಲ್ಲಯುದ್ಧದ ಕ್ರಮಗಳನ್ನೂ ರೀತಿ ನೀತಿಗಳನ್ನೂ ವಿವರಿಸಿ, ಜಟ್ಟಿಗಳಲ್ಲಿ ಒಬ್ಬನು 'ಕಿರೀಟ' (ಅಂದರೆ 'ಸೋತೆ' ಎಂದಿರ ಬಹುದು) ಎಂದು ಉಚ್ಚರಿಸಿದ ಬಳಿಕ ಎದುರಾಳು ಯುದ್ಧವನ್ನು ಮುಂದುವರಿಸು ವಂತಿರಲಿಲ್ಲ ಎಂಬುದನ್ನೂ ಹೇಳುತ್ತಾನೆ. ಸೈನ್ಯವು ಯುದ್ಧಕ್ಕೆ ಮುಂದುವರಿಯುತ್ತಿರುವ ಚಿತ್ರವನ್ನು ಕವಿಯು ನೀಡುತ್ತಾನೆ. ಇದರಿಂದ ನಮಗೆ ಕೆಲವು ವಿವರಗಳು ದೊರಕುತ್ತವೆ. ಸೈನ್ಯದ ಮೊದಲ ಭಾಗಕ್ಕೆ 'ಹಂತಕಾರ ದಳ' ಎಂದರೆ ಕಾಡನ್ನು ಕತ್ತರಿಸಿ ರಸ್ತೆಗಳನ್ನು ಸಿದ್ಧಪಡಿಸುವ ಮುಂಚೂಣಿ ಎಂದರ್ಥ. ಎರಡನೆಯದು ಅಗುವನಿ ತಟ, ಅಂದರೆ ಮುಂದಣ ತುಕಡಿ ಎಂದರ್ಥ. ಮೂರನೆಯದು 'ಪ್ರಧಾನವಲ' ಅಂದರೆ ಮುಖ್ಯದಳ. ನಾಲ್ಕನೆಯದು 'ಪಚ್ಚಿಯನಿ ತಟ' ಅಂದರೆ ಹಿಂಭಾಗದ ರಕ್ಷಕರು. ಕೋಟೆಗಳ ದಿಡ್ಡಿ ಬಾಗಿಲುಗಳನ್ನೂ ಗೋಡೆಗಳನ್ನೂ ಕುದುರೆಗಳು, ಆನೆಗಳು, ಕಬ್ಬಿಣದ ಸಲಾಕೆಗಳು ಮತ್ತು ಕುಳಿ ತೆಗೆಯುವ ಆಯುಧ–ಇವುಗಳ ಸಹಾಯದಿಂದ ಉರುಳಿಸುತ್ತಿದ್ದರೆಂಬುದೂ ನಮಗೆ ಗೊತ್ತಾಗುತ್ತದೆ. ಒಂದು ಕೋಟೆಯನ್ನು ಆಕ್ರಮಿಸಿಕೊಂಡ ಮೇಲೆ, ಆ ಸ್ಥಳ ದಲ್ಲಿ ಬಿಡುತ್ತಿದ್ದ ಸೈನ್ಯಕ್ಕೆ 'ಪರಿದಂಡ' ಎಂದು ಹೆಸರು. ಈ ಎಲ್ಲ ವಿವರಗಳೂ ಮಹಾ ಭಾರತದಲ್ಲಿ ಬರುವ ವ್ಯಕ್ತಿಗಳ ಯುದ್ಧ ಸಂದರ್ಭದಲ್ಲಿ ಉಕ್ತವಾಗಿದ್ದರೂ ಇವುಗಳನ್ನು ಹೇಳುವಾಗ ಕವಿಯು ನಿಜವಾದ ಯುದ್ಧದಲ್ಲಿ ತಾನು ಪಡೆದ ಅನುಭವ ಮತ್ತು ತಿಳಿವಳಿ ಕೆಗಳಿಂದ ಪ್ರಯೋಜನಪಡೆದಿದ್ದಾನೆನ್ನುವುದು ಖಂಡಿತವೆನ್ನುವುದನ್ನು ನಾವು ಅರಿಯ ಬಹುದು.

ರಾಜ ಕಪಿಲೇಶ್ವರನು ನಮ್ಮ ಕವಿಯ ಸಮಕಾಲೀನನಾಗಿದ್ದನಷ್ಟೆ. ಅವನು ಕ್ರಿ.ಶ. 1448 ರಲ್ಲಿ ತನ್ನ ರಾಜ್ಯವನ್ನು ವಿಸ್ತರಿಸುವುದಕ್ಕೆ ಉಪಕ್ರಮ ಮಾಡಿದಾಗ, ಮೊದಲು

ರೆಡ್ಡಿ ರಾಜ್ಯದ ಮೇಲೆ ಆಕ್ರಮಣವನ್ನು ನಡೆಸಿದನು. ಈ ರಾಜ್ಯವು ಕೃಷ್ಣಾ ಗೋದಾವರೀ ನದಿಗಳ ದಡಗಳ ನಡುವೆ ಇದ್ದು ಗುಂಟೂರಿನ ಹತ್ತಿರದ ಕೊಂಡವೀಡು ಎಂಬ ಊರನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡಿತ್ತು. ರಾಜಮಹೇಂದ್ರಿ ಎಂಬುದು ಉಪರಾಜಧಾನಿಯಾಗಿತ್ತು. 1458 ರಲ್ಲಿ ಕಪಿಲೇಶ್ವರನು 'ದೇವರಕೊಂಡ'ದ ಮೇಲೆ ಯುದ್ಧ ಮಾಡಿ ಆ ಪ್ರಮುಖ ಕೋಟೆಯನ್ನೂ ಒಟ್ಟು ತೆಲಂಗಾಣ ಪ್ರದೇಶವೂ ಸೇರಿದಂತೆ ವಾರಂಗಲ್ ಊರನ್ನೂ ತನ್ನ ಕೈವಶ ಮಾಡಿಕೊಂಡನು. 1461 ರಲ್ಲಿ ಬಹಮನಿ ರಾಜ್ಯದ ರಾಜಧಾನಿಯಾದ ಬೀದರ್ ನಗರವನ್ನು ಸ್ವಾಧೀನಪಡಿಸಿಕೊಳ್ಳಲು ಒಂದು ಹಿಂದೂ ಸೈನ್ಯದೊಡನೆ ದಾಳಿಮಾಡಿದನು. 1467 ರಲ್ಲಿ ನೆಲ್ಲೂರು ಜಿಲ್ಲೆಯಲ್ಲಿರುವ ಉದಯಗಿರಿ ಎಂಬ ಪ್ರಮುಖ ದುರ್ಗವನ್ನು ಸ್ವಾಧೀನಪಡಿಸಿಕೊಂಡನು. ಆ ದುರ್ಗದಲ್ಲಿ ನೆಲೆಯೂರಿ ವಿಜಯನಗರದ ರಾಜ್ಯದ ಎಲ್ಲೆಯೊಳಗೆ ನುಗ್ಗಿ ಕೊನೆಗೆ ಚಂದ್ರಗಿರಿಯನ್ನೂ ಕಾಂಚಿಯನ್ನೂ ಗೆದ್ದುಕೊಂಡನು. [3]

ಈ ರೀತಿ ಸನ್ನಿವೇಶಗಳು ಬಲಗೊಳ್ಳುತ್ತಿದ್ದಾಗ ಸೈನ್ಯಕ್ಕೆ ಸೇರಬೇಕೆಂಬ ಕರೆ ಸರಳದಾಸನಿಗೆ ಯಾವ ಸಮಯದಲ್ಲಾದರೂ ಬರಬಹುದಾಗಿದ್ದಿತು. ನಮಗೆ ದೊರೆತಿರುವ ಸಾಕ್ಷ್ಯಾಧಾರಗಳ ಬಲದಿಂದ ಊಹಿಸುವುದಾದರೆ, ಒರಿಸ್ಸಾ ಸೈನ್ಯದ ಈ ಬಗೆಯ ಚಳವಳಿಗಳ ಪ್ರಾರಂಭಕಾಲದಲ್ಲಿಯೇ ಅವನು ಅದರೊಂದಿಗೆ ಸಂಬಂಧವನ್ನು ಹೊಂದಿರಬೇಕು. ಸಮಕಾಲೀನವಾದ ಚಾರಿತ್ರಕ ರಾಜ್ಯಗಳು ಮತ್ತು ರಾಜಕೀಯ ಸ್ಥಳಗಳ ಬಗ್ಗೆ ಕವಿಗೆ ಗಣನೀಯವಾದ ತಿಳಿವಳಿಕೆಯಿತ್ತೆಂಬುದು ಆತನ ಮಹಾಭಾರತದಲ್ಲಿ ಗೊತ್ತಾಗುತ್ತದೆ. ಇದರ ವಿಚಾರವಾಗಿ ನಾವು ಮುಂದೆ ವಿಸ್ತಾರವಾಗಿ ತಿಳಿಸುತ್ತೇವೆ. ಆದರೆ ಕೃಷ್ಣಾ ಗೋದಾವರೀ ನದಿಗಳ ಸಮತಳ ಪ್ರದೇಶದ ಭೌಗೋಳಿಕ ಲಕ್ಷಣಗಳ ಬಗ್ಗೆ, ಆತ್ಮೀಯವಾದ ಸಂಬಂಧದಿಂದ ಗಳಿಸಿಕೊಂಡ ಆಳವಾದ ಪರಿಚಯವು ಕವಿಗೆ ಇದ್ದಿತು. ಈ ಭಾಗಕ್ಕೆ ಸಂಬಂಧಿಸಿದ ಕೃಷ್ಣಾ ಗೋದಾವರೀ ನದಿಗಳನ್ನೂ ರಾಜಮಹೇಂದ್ರಿ (ಮಹೇಂದ್ರ ನಗರ), ಕೊಂಡವೀಡು, ದೇವರಕೊಂಡ, ಶ್ರೀಶೈಲ, ಪಾತಾಳಗಂಗೆ, ವಿಜಯವಾಡ, ಭದ್ರಾಚಲ, ಮಂಗಲಗಿರಿ ಮುಂತಾದ ಊರುಗಳನ್ನು ಅನೇಕ ಸಲ ಹೆಸರಿಸುತ್ತಾನೆ. ಹತ್ತಿರದಲ್ಲಿಯೇ ಪಾತಾಳಗಂಗೆಯು ಹರಿಯುತ್ತಿರುವ ಶ್ರೀಶೈಲ ಪರ್ವತದಲ್ಲಿರುವ ಮಲ್ಲಿಕಾರ್ಜುನ ಶಿವಲಿಂಗದ ಮೂಲವನ್ನು ಕುರಿತ ಪೌರಾಣಿಕ ಕಥೆಗಳನ್ನು ಸ್ಥಳೀಯ ಪೂಜಾರಿಗಳಿಂದ ನೇರವಾಗಿಯೇ ಕೇಳಿ ತಿಳಿದುಕೊಂಡು ತನ್ನ ಕಾವ್ಯದಲ್ಲಿ ಕವಿ ದಾಖಲೆ ಮಾಡಿದ್ದಾನೆ. 1458 ರಲ್ಲಿ ನಡೆದ ದೇವರಕೊಂಡ ಯುದ್ಧದ ಬಗ್ಗೆ ವಿಸ್ತಾರವಾದ ಕಥಾನಕವನ್ನು ನಿರೂಪಿಸಿದ್ದಾನೆ. ಗಜಪತಿ ರಾಜರ ಸೈನ್ಯದಲ್ಲಿ ಸರಳದಾಸನು ಸೇನೆಯಲ್ಲಿದ್ದಾಗ, ಬಹಮನಿ ರಾಜ್ಯವನ್ನು ಕುರಿತು ಅವನು ಕೇಳಿದ್ದ ಕಥೆಗಳನ್ನು ತನ್ನ ಮಹಾಭಾರತದಲ್ಲಿ ಬೇರೆ ವ್ಯತ್ಯಸ್ತ ರೂಪದಲ್ಲಿ ಕವಿ ಉಪಯೋಗಿಸಿದ್ದಾನೆಂಬುದನ್ನು ಮುಂದೆ ತೋರಿಸಲಾಗುವುದು. ಈ ಎಲ್ಲ ಸತ್ಯಾಂಶಗಳನ್ನೂ ಗಮನಿಸಿ ನಮ್ಮ ಈ ಕವಿಯು ತನ್ನ ಯುವಕ ಜೀವನದಲ್ಲಿ ಸೈನಿಕನಾಗಿದ್ದನೆಂದು ತರ್ಕಬದ್ಧವಾಗಿ ನಿಶ್ಚಯಿಸಬಹುದು.

ನಮ್ಮ ಕವಿಯ ಸಮಕಾಲೀನನಾದ ಕಪಿಲೇಂದ್ರನ ಆಡಳಿತ ಕಾಲದಲ್ಲಿ ಅನೇಕ ಕಡೆಗಳಲ್ಲಿ ನಡೆದ ಅನೇಕ ಯುದ್ಧಗಳೂ ಅವುಗಳಿಗಾಗಿ ನಡೆದ ಯುದ್ಧಸಿದ್ಧತೆಗಳೂ ಕವಿಯ ಕಲ್ಪನಾಶಕ್ತಿಯನ್ನು ಉತ್ತೇಜನಗೊಳಿಸಿ ಅವನಲ್ಲಿ ಹುದುಗಿದ್ದ ಕಾವ್ಯರಚನಾಶಕ್ತಿಯನ್ನು ಅಭಿವೃದ್ಧಿಗೊಳಿಸಿದವು. ಅವನ ಕಾವ್ಯಗಳಲ್ಲಿ ಬೇರೆಬೇರೆ ದೇವತೆಗಳಿಗೆ ಪ್ರಾರ್ಥನೆಗಳನ್ನು ಸಲ್ಲಿಸುವಾಗಲೂ ಯುದ್ಧದ ದೃಶ್ಯಗಳನ್ನು ವಿವರಿಸುವಾಗಲೂ ಕವಿಯು ಸ್ಫೂರ್ತಿಯುತನಾಗಿದ್ದಂತೆ ಕಂಡುಬರುತ್ತದೆ. ಯುದ್ಧದಲ್ಲಿ ಉಪಯೋಗಿಸುವ ಆಯುಧಗಳು, ರಣವಾದ್ಯಗಳು, ಇಬ್ಬರ ನಡುವೆ ನಡೆದ ಯುದ್ಧದ ಚಿತ್ರಕ ಸನ್ನಿವೇಶಗಳು, ಕುದುರೆ, ಆನೆ, ರಥ, ಮುಂತಾದುವುಗಳ ತೀವ್ರ ಗಮನದಲ್ಲಿ ಉಂಟಾಗುತ್ತಿದ್ದ ಸೈನಿಕರ ಕಿರುಚಾಟದ ಗೊಂದಲಗಳು –ಇತ್ಯಾದಿಗಳನ್ನು ವರ್ಣಿಸುವಾಗ ಸರಳದಾಸನು ಸ್ಫೂರ್ತಿಗೊಳಗಾಗಿದ್ದಂತೆ ಕಾಣುತ್ತಾನೆ. ಯುದ್ಧದ ಕೊನೆಯಲ್ಲಿ ಕಾಣಬರುವ ಪಾಳುಕಣದ ಪ್ರೇತದೃಶ್ಯವನ್ನು ಕೂಡ ಕವಿಯು ವಿವರವಾಗಿ ಚಿತ್ರಿಸಿದ್ದಾನೆ. ಯುದ್ಧದ ವರ್ಣನೆಗಳನ್ನೂ ಪುಟಗಟ್ಟಲೆ ಬರೆದರೂ ಸಾಕಾಗುತ್ತಿರಲಿಲ್ಲವೆನ್ನಿಸುತ್ತದೆ. ಅವನ ಕಾವ್ಯಗಳ ಬಹುಭಾಗವನ್ನು ಈ ವರ್ಣನೆಗಳೇ ಆಕ್ರಮಿಸಿವೆ. ನಮ್ಮ ದುರದೃಷ್ಟದಿಂದ ಈ ವರ್ಣನೆಗಳು ಅನೇಕ ವೇಳೆ ಒಂದೇ ಬಗೆಯವಾಗಿದ್ದು ಬೇಸರವನ್ನು ತರುತ್ತವೆ ; ಆದರೆ ಅವುಗಳ ನಡುವೆ ಬರುವ ಪ್ರಾರ್ಥನೆಗಳೂ ಸ್ತೋತ್ರಗಳೂ ಈ ಬೇಸರವನ್ನು ಕಳೆಯುತ್ತವೆ.

ಒರಿಸ್ಸಾ ಪ್ರಾಂತದ ಚರಿತ್ರೆಯಲ್ಲಿ ತುಂಬ ಆಂದೋಳನ ನಡೆಯುತ್ತಿದ್ದ ಸಮಯದಲ್ಲಿ ಸರಳದಾಸನು ಜೀವಿಸಿದ್ದು ತನ್ನ ಕಾವ್ಯಗಳನ್ನು ರಚಿಸಿರುವುದರಿಂದ ಸಮಕಾಲೀನ ವಿಚಾರಗಳಿಂದ ಅವನು ಪ್ರಭಾವಿತನಾಗಿರುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಒರಿಸ್ಸಾ ಚರಿತ್ರೆಯಲ್ಲಿ ಕವಿಯ ಸಮಕಾಲೀನನಾದ ಕಪಿಲೇಶ್ವರನ ಆಳ್ವಿಕೆಯು ಅತ್ಯಂತ ವೈಭವಯುತವಾದುದು. ಕ್ರಿಸ್ತಶಕ 1435 ರಲ್ಲಿ ಗಂಗರಾಜನಾದ ನಾಲ್ಕನೆಯ ಭಾನುದೇವನನ್ನು ಸೋಲಿಸಿ ಅವನ ರಾಜ್ಯವನ್ನು ಆಕ್ರಮಿಸಿ ಅವನ ಸಿಂಹಾಸನವನ್ನು ಏರುವ ತನಕ ಒರಿಸ್ಸಾ ಪ್ರಾಂತದ ಹೆಮ್ಮೆಯೆಲ್ಲ ಒಳಸೇರಿ ಹೋಗಿದ್ದಿತಲ್ಲದೆ ಅದು ಉತ್ತರದಿಂದಲೂ ದಕ್ಷಿಣದಿಂದಲೂ ಮಹಮ್ಮದೀಯರ ಬೇಟೆಗೆ ಅನುಕೂಲವಾದ ಆಡುಂಬೊಲವಾಗಿತ್ತು. ಅಲ್ಲಿಯ ತನಕ ಶ್ರದ್ಧಾಪೂರ್ವಕವಾಗಿ ಹಿಂದೂ ರಾಜ್ಯವಾಗಿದ್ದ ಒರಿಸ್ಸಾ ರಾಜ್ಯವು ಇನ್ನೇನು ಮಹಮ್ಮದೀಯ ರಾಜ್ಯವಾಗುತ್ತದೆಂಬ ಹೆದರಿಕೆಯಿತ್ತು. ಇಂಥ ಸಮಯದಲ್ಲಿ ಒರಿಸ್ಸಾದೇಶದ ಸಾಮಾನ್ಯ ಜನತೆಯಿಂದ ಕಪಿಲೇಶ್ವರನು ಮೇಲಕ್ಕೇರಿ ಬಂದು ಒರಿಸ್ಸಾದೇಶದ ಗೌರವವನ್ನು ರಕ್ಷಿಸಿದ್ದೇ ಅಲ್ಲದೆ, ಅವನ ಮೂವತ್ತು ಮೂರು ವರ್ಷಗಳಷ್ಟು ದೀರ್ಘವಾದ ಆಳ್ವಿಕೆಯಲ್ಲಿ ಉತ್ತರದಲ್ಲಿ ಗಂಗೆಯಿಂದ ಹಿಡಿದು ದಕ್ಷಿಣದಲ್ಲಿ ಕಾವೇರಿಯವರೆಗೆ ವಿಸ್ತಾರವಾದ ಚಕ್ರಾಧಿಪತ್ಯವನ್ನು ಸ್ಥಾಪಿಸಿದನು. ಆಧುನಿಕ ಚರಿತ್ರಕಾರನೊಬ್ಬನು ಅವನ ಸಾಧನೆಗಳನ್ನು ಹೀಗೆ ಸಂಗ್ರಹಿಸಿದ್ದಾನೆ :

'ಒರಿಸ್ಸಾ ದೇಶದ ಚರಿತ್ರೆಯಲ್ಲಿ ಕಪಿಲೇಶ್ವರನ ಆಡಳಿತವು ಹೊಸಯುಗ ವೊಂದನ್ನು ಪ್ರಾರಂಭಿಸಿತು. ತುಂಬ ಸಾಮಾನ್ಯವರ್ಗದ ಸನ್ನಿವೇಶದಿಂದ ಮೇಲೆದ್ದು ತನ್ನ ಮಾರ್ಗವನ್ನು ತಾನೇ ಸಮೆದು ಅವನು ಒಂದು ವಿಸ್ತಾರವಾದ ಚಕ್ರಾಧಿಪತ್ಯ ವನ್ನು ಸ್ಥಾಪಿಸಿದನು. ಯುದ್ಧ ವೀರನಾಗಿ ಅವನು ಅಸಾಧಾರಣವಾದ ಶಕ್ತಿಯನ್ನೂ ಕಾರ್ಯಸಾಮರ್ಥ್ಯವನ್ನೂ ಪ್ರಕಟಿಸಿದನು. ಬಂಗಾಳದ ಸುಲ್ತಾನನನ್ನು ಸೋಲಿಸಿ ತನ್ನ ರಾಜ್ಯದ ಈಶಾನ್ಯದ ಎಲ್ಲೆಯನ್ನು ಹೂಗ್ಲಿ ನದಿಯವರೆಗೂ ವಿಸ್ತರಿಸಿದನು. ದಕ್ಷಿಣ ಭಾರತದಲ್ಲಿಯೂ ವಿಸ್ತಾರವಾದ ದಿಗ್ವಿಜಯಗಳನ್ನು ಮಾಡಿದನು. ಬಹಮನಿಯ ಹುಮಾಯೂನ್ ಷಾ, ಸಾಲುವ ನರಸಿಂಹ, ಮಲ್ಲಿಕಾರ್ಜುನ ಮುಂತಾದವರು ಅವನ ಕೈಯಲ್ಲಿ ಸೋಲನ್ನು ಅನುಭವಿಸಿದರು. ಸ್ವಲ್ಪಕಾಲ ಅವನ ರಾಜ್ಯವು ಉತ್ತರದಲ್ಲಿ ಹೂಗ್ಲೀನದಿಯ ಮುಖಜ ಭೂಮಿಯಿಂದ ದಕ್ಷಿಣದಲ್ಲಿ ಕಾವೇರಿಯವರೆಗೂ ವಿಸ್ತರಿ ಸಿದ್ದಿತು. ವೆಲಿಗಲನಿಯ ತಾಮ್ರಶಾಸನದಲ್ಲಿ, ಕಪಿಲೇಂದ್ರನು ಮಾಳ್ವ ಮತ್ತು ನೆಹಲಿ ಗಳನ್ನು ಆಕ್ರಮಿಸಿದನು ಎಂದೂ ಹಂಪೆಯವರೆಗೂ ದಿಗ್ವಿಜಯ ಮಾಡಿದನೆಂದೂ ಹೇಳಿರುವ ಮಾತುಗಳನ್ನು ಸಾಕಷ್ಟು ಸಾಕ್ಷ್ಯಾಧಾರಗಳಿಲ್ಲದಿರುವುದರಿಂದ ನಾವು ಒಪ್ಪ ದಿದ್ದರೂ, ಕಪಿಲೇಂದ್ರನು ಮಹಾ ಯುದ್ಧವಿಜಯಿಯಾಗಿದ್ದನೆಂಬ ಬಗ್ಗೆ ಯಾವ ಭಿನ್ನಾಭಿಪ್ರಾಯವೂ ಇರಲಾರದು. ಅವನು ಸ್ಥಾಪಿಸಿದ ಚಕ್ರಾಧಿಪತ್ಯವು ಉತ್ತರ ಭಾರತದಲ್ಲಿಯೂ ದಖ್ಖನ್ನಿನಲ್ಲಿಯೂ ಮಹಮ್ಮದೀಯ ರಾಜ್ಯಗಳ ಎದುರು ನಿಲ್ಲಬಲ್ಲ ಬಲವಾದ ದುರ್ಗವಾಯಿತು. ಹಿಂದೂ ಸಂಸ್ಕೃತಿಯ ಮುಂಚೂಣಿಯ ಭಟನಾಗಿ ಒರಿಸ್ಸಾ ಕಂಗೊಳಿಸಿತು; ವಾಸುದೇವ ಸಾರ್ವಭೌಮನಂಥ ವಿದ್ವಾಂಸರೂ ಚೈತನ್ಯನಂಥ ಮತಾ ಚಾರ್ಯರೂ ಅಲ್ಲಿ ಬಂದು ವಾಸಿಸುವಂತಾಯಿತು'[3].

ಕಪಿಲೇಶ್ವರನು ಹುಟ್ಟಿದ ವಂಶವನ್ನು ಶಾಸನಗಳಲ್ಲಿ ಸೂರ್ಯವಂಶವೆಂದು ವರ್ಣಿಸ ಲಾಗಿದೆ. ಪ್ರಾಚೀನ ಮತ್ತು ಮಧ್ಯಕಾಲೀನ ಯುಗಗಳಲ್ಲಿದ್ದ ಎಲ್ಲ ರಾಜವಂಶಗಳೂ ಪೌರಾ ಣಿಕವಾಗಿ ಸೂರ್ಯವಂಶಕ್ಕೆ ತಾವು ಸೇರಿದವರೆಂದೇ ಹೇಳಿಕೊಳ್ಳುತ್ತಿದ್ದರು. ಆದರೆ ವಾಸ್ತವ ವಾಗಿ ಕಪಿಲೇಶ್ವರನು ರಾಜ್ಯಾಡಳಿತದಲ್ಲಿ ಕ್ರಾಂತಿಕಾರಕವಾದ ಬದಲಾವಣೆಗಳನ್ನು ಮಾಡಿ ದಾಗ, ತಾನೇ ತುಳಿದ ಗಂಗರ ಆಡಳಿತದ ಸೈನ್ಯದಲ್ಲಿ ಒಂದು ಅಲ್ಪ ಪ್ರಧಾನವಾದ ಅಧಿಕಾರದಲ್ಲಿದ್ದವನು. ಗಂಗರು ಒರಿಸ್ಸಾ ಪ್ರಾಂತದಲ್ಲಿ ಹದಿನಾಲ್ಕು ತಲೆಮಾರುಗಳಿಂದ ರಾಜ್ಯಭಾರಮಾಡುತ್ತಿದ್ದವರು; ಸುಮಾರು ಮುನ್ನೂರ ಇಪ್ಪತ್ತ ಮೂರುವರ್ಷಗಳಷ್ಟು ಕಾಲ ಆಳಿದವರು. ಕ್ರಮೇಣ ಅವರು ಒರಿಸ್ಸಾ ದೇಶದವರೇ ಆಗಿ, ಒರಿಯಾ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಒರಿಯಾ ಭಾಷೆಯನ್ನು ಮಾತನಾಡುತ್ತಿದ್ದರೂ, ಮೂಲತಃ ಅವರು ಆಂಧ್ರಪ್ರದೇಶದಿಂದ ಬಂದ ಹೊರಗಿನವರು. ಹೀಗೆಯೇ ಗಂಗರಿಗಿಂತಲೂ ಹಿಂದೆ ಒರಿಸ್ಸಾದೇಶವನ್ನಾಳಿದ ಸೋಮವಂಶೀ ದೊರೆಗಳು ಕೋಸಲ ದೇಶದಿಂದ (ಮಹಾನದಿಯ ಉತ್ತರ ಪ್ರಸ್ಥಭೂಮಿಯಿಂದ) ಬಂದ ಹೊರಗಿನವರು.

ಸೂರ್ಯವಂಶೀ ದೊರೆಗಳ ಮೂಲಪುರುಷನಾದ ಕಪಿಲೇಶ್ವರನು ಒರಿಸ್ಸಾ ದೇಶಕ್ಕೆ ಸೇರಿದವನು. ಕಪಿಲೇಶ್ವರನ ಮಂತ್ರಿಯಾದ ಗೋಪೀನಾಥಮಹಾಪಾತ್ರನ ಆದೇಶದಂತೆ ಕೊರೆದಿರುವ ಗೋಪೀನಾಥಪುರದ ಶಿಲಾಶಾಸನದಲ್ಲಿ, ಕಪಿಲೇಶ್ವರನ ಮೂಲವನ್ನು ವಿವರಿಸುವಾಗ ಆತನು ಒರಿಸ್ಸಾ ದೇಶಕ್ಕೆ ಸೇರಿದವನೆಂದು ಸ್ಪಷ್ಟವಾಗಿ ಹೇಳಿದೆ. ಇದಕ್ಕೆ ಸಂಬಂಧಿಸಿದ ಪದ್ಯವನ್ನೂ ಆ ಶಾಸನದ ಸಂಪಾದಕರಾದ ಶ್ರೀ ಮನಮೋಹನ ಚಕ್ರವರ್ತಿಯವರು ಹೀಗೆ ಅನುವಾದ ಮಾಡಿದ್ದಾರೆ :

'ಮೂರು ಲೋಕಗಳ ಒಡೆಯನಾದ (ಜಗನ್ನಾಥ) ನೀಲಗಿರಿಯ ದೇವತೆಯ ಅಪ್ಪಣೆಯಂತೆ ಒರಿಸ್ಸಾದೇಶದಲ್ಲಿ ಸೂರ್ಯವಂಶಕ್ಕೆ ಆಭರಣ ಪ್ರಾಯವಾಗಿರುವ ಕಪಿಲೇಂದ್ರನೆಂಬ ದೊರೆಯು ಜನಿಸಿದನು.'[4]

ಅವನ ಮತ್ತು ಅವನ ಮುಂದಿನ ರಾಜರ ಶಾಸನಗಳಲ್ಲಿ ಸೂರ್ಯವಂಶೀರಾಜರ ಮೂಲಪುರುಷನನ್ನು ಕೆಲವು ಸಲ ಕಪಿಲೇಂದ್ರ ಎಂದೂ ಮತ್ತೆ ಕೆಲವು ಸಲ ಕಪಿಲೇಶ್ವರ ಎಂದೂ ವರ್ಣಿಸಲಾಗಿದೆ.

ಹೀಗೆ ಅನೇಕ ಶತಮಾನಗಳ ತರುವಾಯ ಓಡ್ರದೇಶ ಅಥವಾ ಒರಿಸ್ಸಾದವನೇ ಆದವನೊಬ್ಬ, ತನ್ನ ದೇಶದ ಪ್ರಜೆಗಳನ್ನು ಆಳಿ ಅವರಿಗೆ ಒಂದು ಆತ್ಮಗೌರವವನ್ನೂ ಹೆಮ್ಮೆಯನ್ನೂ, ಆಸೆ ಆಕಾಂಕ್ಷೆಗಳನ್ನೂ ತಂದು ಕೊಟ್ಟು ಅವರನ್ನು ವಿಸ್ತಾರವಾದ ದಿಗ್ವಿಜಯದಲ್ಲಿ ಭಾಗಿಗಳಾಗುವಂತೆ ಮುನ್ನಡೆಸಿಕೊಂಡು ಹೋಗಿ ಅವರಿಗೆಲ್ಲ ಭೌಗೋಳಿಕವಾದ ಹೊಸ ಕ್ಷಿತಿಜಗಳನ್ನು ತೆರೆದು ತೋರಿಸಿದನು. ಕಪಿಲೇಶ್ವರನ ದಕ್ಷವೂ ಪ್ರಬಲವೂ ಆದ ಆಡಳಿತದಿಂದ ಸೃಷ್ಟಿಯಾದ ಹೊಸ ಕ್ರಾಂತಿಯಿಂದ ಜನರಲ್ಲಿ ಒರಿಯಾ ಭಾಷಾ ಸಂಸ್ಕೃತಿಗಳನ್ನು ಕುರಿತ ಪ್ರೀತಿವಿಶ್ವಾಸಗಳು ಸ್ವಾಭಾವಿಕವಾದ ಪರಿಣಾಮವಾದುವು. ಉತ್ತಮೋತ್ತಮ ಕುಲದವರು ಅದರಲ್ಲಿಯೂ ಬ್ರಾಹ್ಮಣರು ಸಂಸ್ಕೃತ ಸಾಹಿತ್ಯದ ಭಕ್ತರಾಗಿದ್ದರು. ಅಲ್ಲದೆ ಆಡು ಮಾತಿನ ಮತ್ತು ಅದರಲ್ಲಿ ರಚಿತವಾದ ಸಾಹಿತ್ಯದ ಕಡೆಗೆ ಅವರು ಅಸಡ್ಡೆಯನ್ನು ವ್ಯಕ್ತಪಡಿಸುತ್ತಿದ್ದಿರಬಹುದು. ಆದುದರಿಂದ ಸಾಮಾಜಿಕ ಶ್ರೇಣಿಯ ಕೆಳ ಮೆಟ್ಟಿಲಿನಿಂದಲೇ ಒಬ್ಬ ವ್ಯಕ್ತಿಯು ಮುಂದೆ ನುಗ್ಗಿ ಸಮಕಾಲೀನವಾದ ಸವಾಲನ್ನೂ ಎದುರಿಸಿ ಸಡ್ಡು ಹೊಡೆದು ನಿಲ್ಲಬೇಕಾಯಿತು. ಸರಳದಾಸನು ತಾನು ಅವಿದ್ಯಾವಂತನಾದ ಶೂದ್ರ ಬೇಸಾಯಗಾರನೆಂದೂ ಯಾವ ವಿಧವಾದ ಪ್ರಾಧಾನ್ಯವಿಲ್ಲದವನೆಂದೂ ಲೆಕ್ಕವಿಲ್ಲದಷ್ಟು ಸಲ ಹೇಳಿಕೊಂಡಿದ್ದಾನೆ. ಆದರೆ ಈಚಿನವರೆಲ್ಲ ಅವನ ಬಗ್ಗೆ ಅವನ ಈ ಅನಗತ್ಯವಾದ ಕೀಳು ಭಾವನೆಯನ್ನು ಒಪ್ಪಿಕೊಳ್ಳುವುದಿಲ್ಲ. ಅಷ್ಟೇ ಅಲ್ಲದೆ ಅವನು ಸಮಕಾಲೀನವಾದ ಸವಾಲುಗಳನ್ನು ಒಪ್ಪಿಕೊಂಡ ದೂರದೃಷ್ಟಿಯ ಮುಂದಾಳೆಂದೂ ಒರಿಯಾ ಸಾಹಿತ್ಯದ ಮೂಲಪುರುಷನಲ್ಲದಿದ್ದರೆ ಅದಕ್ಕೆ ಒಂದು ಗೌರವದ ಸ್ಥಾನವನ್ನು ತಂದುಕೊಟ್ಟವನೆಂದೂ ಒಪ್ಪಿ ಕೊಂಡಿದ್ದಾರೆ. ಸರಳದಾಸನಾದ ಬಳಿಕ ಒರಿಯಾ ಸಾಹಿತ್ಯವನ್ನು ಕುರಿತ ವಿರೋಧವನ್ನೂ ಎಲ್ಲ ಜಾತಿಯವರೂ ಬಿಟ್ಟು ಅದು ಅಭಿವೃದ್ಧಿ ಹೊಂದುವುದಕ್ಕೆ

ಎಲ್ಲರೂ ಸೇರಿಯೇ ಶ್ರಮಿಸಿದರು. ಸರಳದಾಸನಾದ ಬಳಿಕ ಅವನನ್ನೂ ಅನುಸರಿಸಿದವನು, ಒರಿಯಾ ಭಾಗವತವನ್ನು ರಚಿಸಿದ ಜಗನ್ನಾಥದಾಸ. ಆತನು ಸಂಸ್ಕೃತ ವಿದ್ವಾಂಸನಾದ ಬ್ರಾಹ್ಮಣ. ಒರಿಯಾ ಸಾಹಿತ್ಯದ ಶ್ರೇಷ್ಠ ಕವಿಗಳಲ್ಲಿ ಒಬ್ಬನೆಂದು ಎಲ್ಲರೂ ಗೌರವಿಸುತ್ತಾರೆ.

ಒರಿಯಾ ದೇಶದ ಚರಿತ್ರೆಯಲ್ಲಿ ಖಾರವೇಲನಾದ ಬಳಿಕ ಬಹು ಪ್ರಧಾನವ್ಯಕ್ತಿಯೆಂಬ ಕಪಿಲೇಶ್ವರನ ಕಾಲದಲ್ಲಿ ನಡೆದ ಆಂದೋಳನಗಳಿಂದ ಅವನ ಸಮಕಾಲೀನನಾದ ಸರಳದಾಸನು ಸ್ಫೂರ್ತಿಪಡೆದಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಅವನಿಗೆ ರಾಜಾಶ್ರಯವು ದೊರಕಿರಬೇಕೆಂಬುದಕ್ಕೆ ಯಾವ ಆಧಾರಗಳೂ ಇಲ್ಲ. ಅವನ ಮಹಾಭಾರತದ ಪ್ರಾರಂಭದಲ್ಲಿ ಜಗನ್ನಾಥಸ್ವಾಮಿಗೆ ಅರ್ಪಿಸಿರುವ ಪ್ರಾರ್ಥನೆಯಲ್ಲಿ ಮಹಾರಾಜನಾದ ಕಪಿಲೇಶ್ವರನ ಹೆಸರನ್ನು ಸೇರಿಸಿ ಅವನನ್ನು ಆ ದೇವತೆಯ ಪ್ರಥಮ ಸೇವಕನೆಂದು ಚಿತ್ರಿಸಿದ್ದಾನೆ. ಹೀಗೆ ಒಂದೇ ಒಂದು ಸಂದರ್ಭದಲ್ಲಿ ಆ ರಾಜನ ಹೆಸರು ಬರುವುದನ್ನು ಬಿಟ್ಟರೆ ಕಪಿಲೇಶ್ವರನಿಗೂ ಸರಳದಾಸನಿಗೂ ಸಂಬಂಧವಿದ್ದು ಅವನಿಂದ ಸರಳದಾಸನು ಪ್ರಯೋಜನವನ್ನು ಪಡೆದಿದ್ದನೆಂದು ಹೇಳಲು ಯಾವ ಆಧಾರಗಳೂ ಇಲ್ಲ. ಸಾಹಿತ್ಯ ಕ್ಷೇತ್ರದಲ್ಲಿ ಸರಳದಾಸನು ಸಲ್ಲಿಸಿದ ಸತ್ವಪೂರ್ಣವಾದ ಸೇವೆಗಾಗಿ ಅವನ ಸಮಕಾಲೀನನಾದ ಗಜಪತಿರಾಜನು ಹತ್ತು ಹಳ್ಳಿಗಳನ್ನು ದತ್ತಿಯಾಗಿ ಕೊಟ್ಟನೆಂಬ ಒಂದು ಕಥೆಯನ್ನು ಯಾರೋ ಹುಟ್ಟಿಸಿ ಅದಕ್ಕೆ ಬೇಕಾದಷ್ಟು ಪ್ರಚಾರವನ್ನು ಕೊಟ್ಟಿದ್ದಾರೆ. ಈ ಕಥೆ ಸಂಪೂರ್ಣವಾಗಿ ಆಧಾರ ರಹಿತವಾದುದು. ಅವನ ಕಾವ್ಯಗಳಲ್ಲಿ ಎಂದಾದರೂ ಕವಿಯು ಸ್ಥಿತಿವಂತನಾಗಿದ್ದನೆಂಬುದಕ್ಕೆ ಕಿಂಚಿತ್ತೂ ಸೂಚನೆಯಿಲ್ಲ. ಆತನ ಕೊನೆಯ ಕಾವ್ಯವಾದ ಚಂಡೀಪುರಾಣವು ಅದರ ರಚನೆಯಾಗುತ್ತಿದ್ದ ಕಾಲದಲ್ಲಿಯೂ ಅವನು ಒಬ್ಬ ಬಡ ಬೇಸಾಯಗಾರನಾಗಿದ್ದನೆಂದು ತಿಳಿಸುತ್ತದೆ. ಈ ಗ್ರಂಥದ ಒಂದೆಡೆಯಲ್ಲಿ ಕವಿಯು ಹೀಗೆ ಬರೆದಿದ್ದಾನೆ : 'ನನ್ನ ಹುಟ್ಟಿನಿಂದಲೂ ನಾನು ಅವಿವೇಕಿ (ಅವಿದ್ಯಾವಂತ); ಅಲ್ಲದೆ ನನ್ನ ಮನೆಯವರೆಲ್ಲರೂ ಅನಕ್ಷರಸ್ಥರು, ಬಲರಾಮನ ಆಯುಧದಿಂದ (ನೇಗಿಲು) ನಾನು ಪ್ರತಿನಿತ್ಯವೂ ಬೇಸಾಯ ಮಾಡುತ್ತೇನೆ.' ಇದೇ ಗ್ರಂಥದ ಮತ್ತೊಂದೆಡೆಯಲ್ಲಿ ತಾನು ಮಕ್ಕಳು ಮೊಮ್ಮಕ್ಕಳುಳ್ಳ ಸಂಸಾರವನ್ನು ನಡೆಸುತ್ತಿರುವನೆಂದೂ ತನ್ನೆಲ್ಲ ಅಗತ್ಯಗಳನ್ನು ಅನ್ನಪೂರ್ಣೆಯು, ಅಂದರೆ ಬೇಸಾಯ ಮಾಡಿದ ಭೂಮಿದೇವಿಯು, ಪೂರೈಸುತ್ತಿದ್ದಾಳೆಂದೂ ಹೇಳಿದ್ದಾನೆ.

ಆದುದರಿಂದ ರಾಜಾಶ್ರಯದಿಂದ ಸರಳದಾಸನು ಸಿರಿವಂತನಾಗಿದ್ದನೆಂದು ತಿಳಿಯಲು ಯಾವ ಕಾರಣವೂ ಇಲ್ಲ ಅಥವಾ ಸಂಸಾರವನ್ನು ತ್ಯಜಿಸಿ ಐಶ್ವರ್ಯವಂತನಾದ ಮತೀಯ ವಿದ್ವಾಂಸನೆಂದು ಹೇಳಲೂ ಆಧಾರಗಳಿಲ್ಲ. ಜೀವನದ ವಿವಿಧ ಕ್ಷೇತ್ರಗಳಲ್ಲಿ ತಮ್ಮ ಕಾರ್ಯಸಾಮರ್ಥ್ಯದಿಂದ ಮಾನವ ನಾಗರಿಕತೆಯನ್ನೇ ಕ್ರಾಂತಿಗೊಳಗುಮಾಡಿದ ಪ್ರತಿಭಾಶಾಲಿಗಳು ಅವರು ಬದುಕಿದ್ದ ಕಾಲದಲ್ಲಿ ಯಾವ ವಿಧವಾದ ಗೌರವವನ್ನಾಗಲೀ ಪ್ರತಿಫಲವನ್ನಾಗಲೀ ಪಡೆಯಲಿಲ್ಲವೆಂಬ ದುಃಖದ ಅಂಶವನ್ನು ಚರಿತ್ರೆಯು

ಎಲ್ಲ ದೇಶಗಳಲ್ಲಿಯೂ ದಾಖಲೆಮಾಡಿದೆ. ನಮ್ಮ ಕವಿಯೂ ಕೂಡ ಇದೇ ವಿಧಿಗೆ ಒಳಗಾಗಿ ಆಜೀವಪರ್ಯಂತವೂ ಬಡವನೇ ಆಗಿದ್ದು ತನ್ನ ಆಸಕ್ತಿಯ ಕಾರ್ಯವನ್ನು ಕೊನೆಯತನಕ ಬಿಡದೆ ಮುಂದುವರಿಸಿದನು. ಈಗಲೂ ಕೂಡ ಒರಿಸ್ಸಾದೇಶದಲ್ಲಿ ಈ ಕವಿಯ ಕಾವ್ಯಗಳ ಬಗ್ಗೆಯೂ ಆತನ ಹಿರಿಮೆಯ ಬಗ್ಗೆಯೂ ಸಾಕಷ್ಟು ಮೆಚ್ಚಿಗೆ ಕಂಡು ಬರುತ್ತಿಲ್ಲ. ಆತನು ಬದುಕಿದ್ದಾಗ, ದೇಶಭಾಷೆಯನ್ನೂ ಸಾಹಿತ್ಯವನ್ನೂ ಕುರಿತು ವಿದ್ಯಾವಂತರೂ ಪ್ರಭಾವಶಾಲಿಗಳೂ ಗೌರವವನ್ನು ತೋರಿಸದೆ ಇದ್ದಾಗ, ಆತನಿಗೆ ತಕ್ಕ ಪ್ರಶಸ್ತಿ ದೊರಕಿದ್ದಿತೆಂದು ಊಹಿಸುವುದು ಕೂಡ ಅತಿಯಾದೀತು.

ರಾಜಾಶ್ರಯವು ಕವಿಗೆ ದೊರಕಿದ್ದಿರಬೇಕೆಂಬ ಬಗ್ಗೆ ಯಾವ ಆಧಾರಗಳೂ ಇಲ್ಲದಿದ್ದರೂ, ಕವಿಯು ಆ ಕಾಲದಲ್ಲಿ ಬದುಕಿದ್ದವನಾದುದರಿಂದ ಅಂದಿನ ಪ್ರಭಾವ ಶಾಲೀ ವ್ಯಕ್ತಿಗಳ ಮತ್ತು ತನ್ನ ರಾಜನ ಅಭಿಪ್ರಾಯಗಳನ್ನೇ — ರಾಜ್ಯವನ್ನೆಲ್ಲ ಸೈನಿಕ ಶಿಕ್ಷಣಕ್ಕೆ ಒಳಪಡಿಸಬೇಕೆಂಬ ಅಭಿಪ್ರಾಯವನ್ನೇ — ಖಂಡಿತವಾಗಿಯೂ ಪಡೆದಿದ್ದನು. ವಾಸ್ತವಿಕವಾಗಿ ಅವನ ಕಾವ್ಯಗಳಲ್ಲಿ ಬರುವ ಅನೇಕ ಯುದ್ಧ ಸನ್ನಿವೇಶಗಳ ಮೂಲಕ ಸಾಮಾನ್ಯ ಜನರ ಹೃದಯದಲ್ಲಿ ಯುದ್ಧಾಸಕ್ತಿಯನ್ನು ಉದ್ದೇಶಿಸುವುದಕ್ಕೂ ಅವರನ್ನು ಯುದ್ಧಕ್ಕೆ ಉತ್ತೇಜನಗೊಳಿಸುವುದಕ್ಕೂ ಕವಿ ಉದ್ದೇಶಿಸಿರಬೇಕೆನ್ನಿಸುತ್ತದೆ. ಆಯುಧ ಹಿಡಿದು ಯುದ್ಧರಂಗದಲ್ಲಿ ಸಾಯುವುದು ಅತ್ಯಂತ ಪುಣ್ಯಕರವಾದ ಧಾರ್ಮಿಕ ಕ್ರಿಯೆಯೆಂದು ಕವಿ ಭಾವಿಸಿದ್ದನು. ಹಾಗೆ ಸತ್ತವನು ಇಹಲೋಕದ ಪಾಪ ಗಳೆಲ್ಲವನ್ನೂ ಪರಿಹಾರಮಾಡಿಕೊಂಡು ಸ್ವರ್ಗವನ್ನು ಸಂಪಾದಿಸುತ್ತಿದ್ದನೆಂದು ಅವನ ಅಭಿಪ್ರಾಯ. ಸಭಾಪರ್ವದಲ್ಲಿ ನಾರದನು ಶ್ರೀಕೃಷ್ಣನಿಗೆ ಒಂದು ಮಾತನ್ನು ತಿಳಿಸುತ್ತಾನೆ. ಬ್ರಹ್ಮಹತ್ಯಾಪಾಪಕ್ಕೆ ಪರಿಹಾರವೇನೆಂಬುದು ಪ್ರಶ್ನೆ. ಅದಕ್ಕೆ ಉತ್ತರ ಇದು : ಆಯುಧ ಸಹಿತನಾಗಿ ಯುದ್ಧರಂಗದಲ್ಲಿ ಮಡಿಯುವುದು, ಇರುವ ಅನೇಕ ಪರಿಹಾರಗಳಲ್ಲಿ ಒಂದು. ಗಂಡುಮಕ್ಕಳನ್ನು ಪಡೆಯುವುದರ ಆವಶ್ಯಕತೆಯನ್ನು ಕುರಿತು ಕವಿ ಬಹು ಪ್ರಾಧಾನ್ಯವನ್ನು ಸೂಚಿಸಿದ್ದರೂ, ಹೆಣ್ಣುಮಕ್ಕಳನ್ನು ಪಡೆಯುವ ಅಗತ್ಯತೆಯ ಬಗ್ಗೆ ಯಾವ ಮಾತನ್ನೂ ಆಡಿಲ್ಲ. ಪುತ್ರ ಜನನವು ತುಂಬ ಆನಂದ ದಾಯಕವಾದ ಸಂದರ್ಭವೆಂದು ಅದನ್ನು ಕೆಲವು ಸಲ ವಿವರವಾಗಿ ವರ್ಣಿಸಿದ್ದಾನೆ. ಆದರೆ ಹೆಣ್ಣುಮಕ್ಕಳು ಹುಟ್ಟಿದ ಸಂದರ್ಭಗಳನ್ನು ಹಾಗೆಯೇ ಬಿಟ್ಟಿದ್ದಾನೆ. ಅವನ ಪ್ರಕಾರ ಗಂಡುಮಗುವನ್ನು ಪಡೆಯದ ಹೆಂಡತಿಯು ದುರದೃಷ್ಟಶಾಲಿನಿ ಮತ್ತು ಅಶುಭಕಾರಿಣಿ; ಮಹಾಭಾರತದ ಆದಿಪರ್ವದ ಭಾಗದಲ್ಲಿ, ಅಂಥವಳಿಗೆ ಗಂಡುಮಕ್ಕಳನ್ನು ಪಡೆಯುವ ಎಂಟು ಕ್ರಮಗಳನ್ನು ನಿರೂಪಿಸಿದ್ದಾನೆ:

ಸರಳದಾಸನು ಹೀಗೆ ಹೇಳಿದ್ದಾನೆ : ''ನಿನ್ನ ಗಂಡನಿಂದ ನಿನಗೆ ಗಂಡುಮಗು ಆಗದಿದ್ದರೆ ಶ್ರೇಷ್ಠನಾದ ಋಷಿಯನ್ನು ಕರೆಸಿ ಆತನಿಂದ 'ಪುತ್ರೇಷ್ಟಿ' ಎಂಬ ಯಜ್ಞವನ್ನು ಮಾಡಿಸು. ಹೀಗೆ ಯಜ್ಞದ ಸಹಾಯದಿಂದ ಗಂಡು ಮಗನಾಗದಿದ್ದರೆ ನಿನ್ನಲ್ಲಿರುವ ಅತ್ಯುತ್ತಮ ವಸ್ತುಗಳನ್ನು ಯಾತ್ರಾಕ್ಷೇತ್ರಗಳಲ್ಲಿ ದಾನಮಾಡು. ಈ

ಕ್ರಮದಿಂದಲೂ ಮಗನಾಗದಿದ್ದರೆ, ಆದಿಯಿಂದ ಅಂತ್ಯದವರೆಗೆ ರಾಮಾಯಣವನ್ನು ಶ್ರವಣಮಾಡು. ಈ ಕ್ರಮದಿಂದಲೂ ಮಗನಾಗದಿದ್ದರೆ, ಬೇರೆ ದಂಪತಿಗಳಿಂದ ಒಬ್ಬ ಮಗನನ್ನು ಕೊಂಡು ಅವನನ್ನು ಪೋಷಿಸು. ಎಷ್ಟು ಹುಡುಕಿದರೂ ಇಂಥ ಮಗ ಸಿಕ್ಕದಿದ್ದರೆ ನಿನ್ನ ಗಂಡನ ಒಪ್ಪಿಗೆ ಪಡೆದು ಮತ್ತೊಬ್ಬ ಗಂಡಸಿನೊಡನೆ ಸಂಭೋಗ ಮಾಡು. ಈ ಉಪಾಯದಿಂದಲೂ ಮಗನಾಗದಿದ್ದರೆ ಧಾರ್ಮಿಕ ಪುಣ್ಯವನ್ನು ಸಂಪಾದಿಸುವುದಕ್ಕಾಗಿ ನಿನ್ನ ನಾದಿನಿಯ ಮಗನಿಗೆ ಮದುವೆ ಮಾಡು. ಹೀಗೂ ಮಗನನ್ನು ಪಡೆಯುವುದು ಸಾಧ್ಯವಾಗದಿದ್ದಲ್ಲಿ ದಾರಿಗಳ ಇಕ್ಕೆಲಗಳಲ್ಲಿ ಮರಗಳನ್ನು ನೆಡಿಸು.''

ಸೈನ್ಯಕ್ಕೆ ಅನೇಕ ಸಂಖ್ಯೆಯಲ್ಲಿ ಜನರು ಅಗತ್ಯವಾಗಿದ್ದುದರಿಂದಲೂ ಯುದ್ಧರಂಗದಲ್ಲಿ ಅವರಲ್ಲನೇಕರು ಸಾಯುತ್ತಿದ್ದುದರಿಂದಲೂ ಗಂಡುಮಕ್ಕಳನ್ನು ಕುರಿತ ಕವಿಯ ಪಕ್ಷಪಾತವನ್ನು ಗಂಡಸರ ಸಂಖ್ಯೆಯನ್ನು ಹೆಚ್ಚಿಸಬೇಕೆಂಬ ಅವನ ಆಕಾಂಕ್ಷೆಯನ್ನು ನಾವು ಅರ್ಥಮಾಡಿಕೊಳ್ಳುವುದು ಸುಲಭ. ಸರಳದಾಸನ ಪ್ರಕಾರ ಪ್ರೇಮವೆನ್ನುವುದು ಒಂದು ಉದ್ದೇಶಸಾಧನೆಯ ಮಾರ್ಗ ಅಷ್ಟೆ! ಆ ಉದ್ದೇಶ ಒಬ್ಬ ಮಗನನ್ನು ಪಡೆಯುವುದು. ಅವನು ವರ್ಣಿಸಿರುವ ಎಲ್ಲ ಪ್ರೇಮಪ್ರಸಂಗಗಳೂ ಗಂಡುಮಕ್ಕಳ ಜನನದಲ್ಲಿ ಪರ್ಯವಸಾನವಾಗುತ್ತವೆ; ಕೆಲವು ಸಲ ಪ್ರೇಮಪ್ರಸಂಗವಾದ ತರುವಾಯದಲ್ಲಿ ಸದ್ಯೋಪ್ರಸೂತಿಯಾಗುವುದೂ ಉಂಟು. ಅವನು ವರ್ಣಿಸಿರುವ ಪ್ರೇಮಪ್ರಸಂಗಗಳಲ್ಲಿ ಪ್ರೇಮಯಾಚನೆ. ಶೃಂಗಾರ, ವಿಪ್ರಲಂಭ, ನಿಟ್ಟುಸಿರು, ಕಣ್ಣೀರು—ಇವು ಯಾವುವೂ ಇಲ್ಲ. ಪ್ರೇಮಿಗಳು ಪರಸ್ಪರ ಸಂಧಿಸಿದೊಡನೆಯೇ ಸಂಭೋಗ ಪ್ರಾರಂಭವಾಗುತ್ತದೆ. ವಾಯುದೇವನಿಗೂ ಪಾಂಡುವಿನ ಪ್ರಥಮ ಪತ್ನಿಯಾದ ಕುಂತಿಗೂ ಪ್ರೇಮ ಉಂಟಾದ ಪ್ರಸಂಗದಲ್ಲಿ ಭೀಮನು ಹುಟ್ಟಿದ ವರ್ಣನೆಯ ದೃಷ್ಟಾಂತ ಇದಕ್ಕೆ ಉದಾಹರಣೆ.

ವಾಯುದೇವನು ಕುಂತಿಯೆದುರು ತತ್‌ಕ್ಷಣ ಪ್ರತ್ಯಕ್ಷವಾಗಿ ಹೀಗೆ ಹೇಳಿದನು: ''ಭೋಜರಾಜನ ಪುತ್ರಿಯೇ, ನಿನ್ನನ್ನು ಸಂಭೋಗಿಸಲು ನನಗೆ ನೀನು ಅವಕಾಶ ಕೊಡಬೇಕು. ದುರ್ವಾಸನ ಮಂತ್ರದ ಭಯದಿಂದ ನಾನು ಮಾನವರೂಪವನ್ನು ಧರಿಸಿದ್ದೇನೆ.'' ಅವನನ್ನು ನೋಡಿ ಕುಂತಿಗೆ ನಾಚಿಕೆಯುಂಟಾಯಿತು. ಆದರೆ ವಾಯುದೇವನು ಅವಳನ್ನು ಒಡನೆಯೇ ತನ್ನ ತೊಡೆಗೆ ಸೆಳೆದು ಕೊಂಡನು. ಅವಳನ್ನು ಮಲಗಿಸಿ, ಗಂಡನೊಬ್ಬನೇ ಇರುವಾಗ ಹೆಂಗಸಿನ ಬಟ್ಟೆಯೆಲ್ಲವೂ ಹೇಗೆ ಕಳಚಿ ಬೀಳುವುವೋ ಹಾಗೆ ಅವಳನ್ನೂ ಬತ್ತಲೆಮಾಡಿದನು. ವಾಯುದೇವನೊಡನೆ ಸಂಭೋಗಿಸಲು ಕುಂತಿಗೆ ತುಂಬ ಅಪೇಕ್ಷೆಯುಂಟಾಯಿತು. ಆದುದರಿಂದ ಇಬ್ಬರ ಕಾಮವೂ ಅತ್ಯಂತ ತೀವ್ರವಾಯಿತು. ಅನಾದಿ ಸ್ತ್ರೀಶಕ್ತಿ ಸ್ವರೂಪಳಾದ ಕುಂತಿಯೂ ಶಕ್ತಿ ದೇವತೆಯಾದ ವಾಯುವೂ ತಮ್ಮೆಲ್ಲ ಇಂದ್ರಿಯಗಳ ಬಯಕೆಯೊಡನೆ ಸಂಭೋಗದಲ್ಲಿ ನಿರತರಾದರು. ಪ್ರಚಂಡ ದೇವತೆಯಾದ ವಾಯುವು ಸಂಪೂರ್ಣ ತೃಪ್ತಿಯಿಂದಲೂ ಸಂಪೂರ್ಣ ವೇಗದಿಂದಲೂ ಎಂದೂ ವಿಫಲವಾಗದ ತನ್ನ ರೇತಸ್ಸನ್ನು ಸುರಿಸಿದನು.

ಈ ಸಂಭೋಗಕ್ರಿಯೆಯಾದೊಡನೆಯೇ ಭೀಮನು ಜನಿಸಿದನು. ಆತನು ಅತ್ರ ಜೋರಾದ ಅಳು ಎಲ್ಲರಿಗೂ ಭಯುವನ್ನುಂಟು ಮಾಡಿತು. ಸರಳದಾಸನು ಚಿತ್ರಿಸಿರುವ ಶೃಂಗಾರ ಪ್ರಸಂಗಗಳೆಲ್ಲ ಹೆಚ್ಚು ಕಡಿಮೆ ಮೇಲೆ ತಿಳಿಸಿದಂತೆಯೇ ಇವೆ. ಸಂಭೋಗ ವಾದೊಡನೆಯೇ ಉಂಟಾಗುವ ಸದ್ಯಃ ಪ್ರಸೂತಿಯ ವಿಶೇಷ ಅರ್ಹತೆಯು ದೇವತೆ ಗಳಿಗೂ ಖೇಚರರಿಗೂ ಮಾತ್ರ ಅನ್ವಯಿಸುವಂತೆ ಮಾಡಿದ್ದಾನೆ ಕವಿ. ಸಾಧಾರಣ ಮಾನವರಾದರೆ ತಾಯಿಯಾದವಳು ಮಗುವನ್ನು ಗರ್ಭದಲ್ಲಿ ಹತ್ತು ತಿಂಗಳ ತನಕ ಹೊರುವ ಹೊಣೆಯನ್ನು ಹೊರಿಸಿದ್ದಾನೆ. ಗಂಡು ಹೆಣ್ಣಿನ ಪ್ರೇಮವನ್ನಪೇಕ್ಷಿಸುವ ಮಾನವ ಹೃದಯದ ಬಯಕೆಯು ಪುತ್ರೋತ್ಪತ್ತಿಯಲ್ಲದೆ ಬೇರೆ ಯಾವುದೂ ಅಲ್ಲವೆಂಬ ದೃಢವಾದ ಅಭಿಪ್ರಾಯವನ್ನು ಕವಿಹೊಂದಿದ್ದಂತೆ ಕಂಡು ಬರುತ್ತದೆ. ತನ್ನ ಎಲ್ಲ ಕಾವ್ಯ ಗಳಲ್ಲಿಯೂ ಈ ಅಭಿಪ್ರಾಯವನ್ನು ಏಕರೀತಿಯಲ್ಲಿ ನಿರೂಪಿಸಿದ್ದಾನೆ.

ಆತನ ಕಾವ್ಯಗಳಲ್ಲಿನ ಮುಖ್ಯ ರಸ ಶೃಂಗಾರವಲ್ಲ ; ಅದು ವೀರ. ಅವನ ಕಾವ್ಯ ರಚನೆಗೆ ಧಾರ್ಮಿಕೋತ್ಸಾಹವೂ ಕಾರಣವಾಗಿತ್ತು. ಆದುದರಿಂದ ಎಲ್ಲರಿಗೂ ಅರ್ಥ ವಾಗುವಂಥ ಭಾಷೆಯಲ್ಲಿ ಧಾರ್ಮಿಕ ಗ್ರಂಥಗಳನ್ನು ರಚಿಸಿ ಒರಿಸ್ಸಾಪ್ರಾಂತದ ಜನರಿಗೆಲ್ಲ ಅದು ದೊರಕುವಂತೆ ಮಾಡಬೇಕೆಂದು ಅವನು ಉದ್ಯೋಗಶೀಲನಾದನು. 'ಎಲ್ಲ ಮಾನ ವರ' ಉಪಯೋಗಕ್ಕಾಗಿ ತನ್ನ ಕಾವ್ಯಗಳನ್ನು ತಾನು ರಚಿಸಿದ್ದೇನೆಂದು ನಿಸ್ಸಂದೇಹ ವಾದ ಮಾತುಗಳಲ್ಲಿ ಅವನು ಹೇಳಿದ್ದಾನೆ. ಈ ಹೇಳಿಕೆಯನ್ನನುಸರಿಸಿ ಕಾವ್ಯರಚನೆ ಯನ್ನು ಅವನು ತನ್ನ ಜೀವನದ ಕಾರ್ಯವನ್ನಾಗಿ ಮಾಡಿಕೊಂಡನು. ಒರಿಸ್ಸಾ ಪ್ರಾಂತ್ಯದ ಗಜಪತಿ ರಾಜರ ಸೈನ್ಯದೊಡನೆ ಅವನು ಹೊಂದಿದ್ದ ಸಂಬಂಧದಿಂದ ಅವ ನಿಗೆ ಅನೇಕ ಅನುಭವಗಳು ದೊರಕಿದವು. ಅವನು ಕೇಳಿದ ಕಥೆಗಳು, ನೋಡಿದ ಯುದ್ಧಗಳು, ಸೈನ್ಯದೊಡನೆ ಅವನು ಪ್ರಯಾಣ ಮಾಡಿದ ಪ್ರದೇಶಗಳು, ಚಾರಿತ್ರಿಕ ಘಟನೆಗಳು, ಅರಿತ ಹೆಸರುಗಳು – ಇವೆಲ್ಲವೂ ಆತನ ಅದ್ಭುತ ಸ್ಮರಣೆಯಲ್ಲಿ ನಿಂತು ಅವನ ಕಾವ್ಯರಚನೆಯಲ್ಲಿ ಪ್ರಯೋಗಗೊಂಡುವು. ಜನ ಸಂಸರ್ಗದಿಂದ ಅವನು ಪಡೆದ ಬಹುಮುಖವಾದ ಅನುಭವವು ಅವನ ಮಾನಸಿಕ ಕ್ಷೇತ್ರವ್ಯಾಪ್ತಿಯನ್ನು ಅಧಿಕ ಗೊಳಿಸಿದವು. ಇಲ್ಲದಿದ್ದರೆ ಅವನ ಮಹಾಭಾರತದಲ್ಲಿ ಅವನು ಅಭಿವ್ಯಕ್ತಿಗೊಳಿಸಿರುವ ಅನೇಕ ವಿಷಯುಗಳ ಬಗ್ಗೆ ಆತನ ವಿಚಾರ ಸಂಗ್ರಹವು ಆದರಲ್ಲಿಯೂ ಚಾರಿತ್ರಕ ಭೌಗೋ ಳಿಕ ವಿವರಗಳು ಯಾವುದೋ ಕುಗ್ರಾಮದಲ್ಲಿ ವಾಸಿಸುವ ಮನುಷ್ಯನಿಗೆ ಸಾಧ್ಯವಾಗಬಹು ದೆಂದು ಊಹಿಸುವುದು ಅಸಾಧ್ಯ. ಈ ಬಗ್ಗೆ ವಿವರಗಳು ಮುಂದೆ ಬರುತ್ತವೆ. ಮಧ್ಯ ಕಾಲೀನ ಭಾರತ ಸೈನ್ಯಗಳಲ್ಲಿ ದಂಡನಾಯಕರೂ ಸೈನಿಕರೂ ಮಾತ್ರ ಇರುತ್ತಿರಲಿಲ್ಲ – ಆಡಳಿತಗಾರರು, ವಿದ್ವಾಂಸರು, ವಿವೇಕಿಗಳು, ರಾಯಭಾರಿಗಳು, ಸಂದೇಶವಾಹಕರು, ಮನರಂಜನೆಕಾರರು, ಜ್ಯೋತಿಷ್ಯರು, ವೈದ್ಯರು, ಚರಿತ್ರಲೇಖಕರು, ಭೂಗೋಳ ತಜ್ಞರು ಮುಂತಾದವರೆಲ್ಲಾ ಇರುತ್ತಿದ್ದರೆಂಬುದನ್ನು ಸೂಚಿಸಬಹುದು. ಅಗಾಧವಾದ

ಸ್ಮರಣಶಕ್ತಿಯನ್ನೂ ಆಳವಾದ ಜ್ಞಾನವನ್ನೂ ಪಡೆದಿದ್ದ ಸರಳದಾಸನು ಸೈನ್ಯದೊಡನೆ ತಾನು ಮಾಡಿದ ಪ್ರಯಾಣವನ್ನು ಸಂಪೂರ್ಣವಾಗಿ ಉಪಯೋಗಿಸಿಕೊಂಡಿದ್ದಾನೆ. ಈ ಸಮಯದಲ್ಲಿ ಅವನು ನೋಡಿದ ಅಥವಾ ಕೇಳಿದ ಯಾವೊಂದು ವಿಷಯವೂ ತಪ್ಪಿ ಹೋದಂತೆ ಕಂಡು ಬರುವುದಿಲ್ಲ.

ಸರಳದಾಸನು ಒರಿಯಾ ಸಾಹಿತ್ಯದ ಮೂಲ ಪುರುಷನಲ್ಲದಿದ್ದರೂ ಆ ಸಾಹಿತ್ಯಕ್ಕೆ ಸತ್ವವನ್ನು ತುಂಬಿದವನೆಂದು ಆಗಲೇ ಹೇಳಿದೆ. ಕೆಲವು ಕಾವ್ಯಗಳು, ಮುಖ್ಯವಾಗಿ ವತ್ಸ ದಾಸನ 'ಕಳಶ ಚೌತೀಸ' ಮತ್ತು ಮಾರ್ಕಂಡದಾಸನ 'ಕೇಶವ ಕೋಯಿಲಿ' ಎಂಬು ವನ್ನು ಸರಳದಾಸನಿಗಿಂತ ಹಿಂದಿನಕಾಲಕ್ಕೆ ಸಂಬಂಧಿಸಿದುವೆಂದು ಹೇಳುತ್ತಾರೆ ; ಆದರೆ ಅವುಗಳ ಕಾಲದ ಬಗ್ಗೆ ಕೊಟ್ಟಿರುವ ವಾದವು ಇನ್ನೂ ಅಷ್ಟು ನಿರ್ಧಾರವಾಗಿಲ್ಲ. ಈ ಎರಡು ಪುಟ್ಟ ಕವನಗಳ ಮುಖ್ಯ ವೈಚಿತ್ರ್ಯವೇನೆಂದರೆ, ಅವುಗಳಲ್ಲಿ ಪ್ರತಿಯೊಂದು ಪದ್ಯವೂ, ಒರಿಯಾ ಅಕ್ಷರಮಾಲೆಯ ವ್ಯಂಜನಗಳಲ್ಲಿ ಕ್ರಮವಾಗಿ ಮೂವತ್ತುನಾಲ್ಕು ಅಕ್ಷರಗಳಲ್ಲಿ ಒಂದರಿಂದ ಮೊದಲಾಗುತ್ತವೆ. ಆದುದರಿಂದ ಈ ಕವನಗಳಲ್ಲಿ ಮೂವತ್ತ ನಾಲ್ಕು ಪದ್ಯಗಳು ಮಾತ್ರ ಇವೆ. ಈ ಛಂದೋ ವೈಚಿತ್ರ್ಯವು ಸರಳದಾಸನ ವಿಸ್ತಾರ ವಾದ ಕಾವ್ಯಗಳಲ್ಲಿ ಎಲ್ಲಿಯೂ ಕಾಣುವುದಿಲ್ಲ. ಅಲ್ಲದೆ ಈ ಸಣ್ಣ ಕಾವ್ಯಗಳನ್ನು ಅವನು ತನ್ನ ಮಾದರಿಯಾಗಿ ಉಪಯೋಗಿಸಿದನೆಂದು ಹೇಳುವುದೂ ಸಾಧ್ಯವಿಲ್ಲ. ಬಂಗಾಳಿ ಗಳಂತೆ, ಒರಿಸ್ಸಾ ಸಾಹಿತಿಗಳೂ ಕೂಡ ಈ ಪ್ರಾಚೀನ ಒರಿಯಾ ಕಾವ್ಯಗಳನ್ನು ಬೌದ್ಧ ಮತೀಯವಾದ ಮೂಲವುಳ್ಳ ರಹಸ್ಯಾರ್ಥಗೀತಗಳೆಂದೂ, ಅವುಗಳು ಬೌದ್ಧಗಾನ, ದೋಹಾ, ಚರ್ಯಾಪಾದ ಎಂಬ ಹೆಸರುಗಳನ್ನೂಹೊಂದಿದ್ದವೆಂದೂ, ಕ್ರಿಸ್ತಶಕ 9 ನೆಯ ಶತಮಾನಕ್ಕೆ ಅವು ಸೇರಿದುವೆಂದೂ ವಾದಿಸುತ್ತಾರೆ. ಆದರೂ ಈ ಬೌದ್ಧ ಮೂಲ ಗಳಿಂದ ಕ್ರಮಬದ್ಧವಾದ ವಿಕಾಸವನ್ನು ನಿರ್ಧರಿಸುವುದರಲ್ಲಿ ಅವರು ಇನ್ನೂ ಯಶಸ್ವಿಗಳಾ ಗಿಲ್ಲ. ಇವರೆಲ್ಲರ ಗಮನಕ್ಕೂ ಬಾರದಿರುವ ಬಹುಮುಖ್ಯವಾದ ಅಂಶವೇದರೆ, ಈ ಕಾವ್ಯ ಗಳ ಹಸ್ತಪ್ರತಿಯೊಂದೂ ಈವರೆಗೆ ಉತ್ತರ ಭಾರತದಲ್ಲಾಗಲಿ ದಕ್ಷಿಣ ಭಾರತದಲ್ಲಾಗಲೀ ದೊರೆತಿಲ್ಲ. ಅಷ್ಟೇ ಅಲ್ಲ,ಹಾಗೆ ವಾದಿಸುವವರು ಇರುವ ಪ್ರದೇಶದಲ್ಲಿಯೇ ಇವು ದೊರ ಕಿಲ್ಲ. ಯಾವುದಾದರೂ ಭಾಗದಲ್ಲಾಗಲೀ ಭಾಗಗಳಲ್ಲಾಗಲಿ ಅದು ಜೀವಂತವಾದ ಸಾಹಿತ್ಯ ವಾಗಿದ್ದಿದ್ದರೆ, ಅವು ಹುಟ್ಟಿದ ಪ್ರದೇಶದಿಂದ ಸಂಪೂರ್ಣವಾಗಿ ಮರೆಯಾಗಿ ಬಿಡುವುದು ಖಂಡಿತ ಸಾಧ್ಯವಾಗುತ್ತಿರಲಿಲ್ಲ. ಬಹುಶಃ ಅವು ಸಂಸ್ಕೃತಕ್ಕೊ ಪಾಲಿಗೋ ಸಮೀಪ ಸಂಬಂಧಿಯಾದ ಯಾವುದೋ ಭಾಷೆಯಲ್ಲಿ ರಚಿತವಾಗಿದ್ದಿರಬೇಕು. ಆ ಭಾಷೆ ಆಡು ಮಾತಾಗಿದ್ದಿರಲಾರದು. ಹೀಗೆ ಮೂಲದ ಬಗ್ಗೆಯೇ ಸಂದೇಹವಿರುವ ಅಲ್ಲದೆ ಶತಮಾನ ಗಳ ಅಂತರವುಳ್ಳ ಈ ಹಾಡುಗಳಿಂದ ಸರಳದಾಸನ ಕಾವ್ಯರಚನೆಗೆ ಮಾದರಿಗಳು ದೊರ ಕಿದ್ದಿರಬಹುದೆಂಬುದನ್ನು ನಂಬುವುದು ನಮಗೆ ಸಾಧ್ಯವಾಗುವುದಿಲ್ಲ. ಭಾರತದ ಇತರ ಭಾಷೆಗಳ ಮತ್ತು ಸಾಹಿತ್ಯಗಳ ಬಗ್ಗೆ ಈ ಕವಿಗೆ ಪರಿಚಯವಿದ್ದಿತೆಂಬುದಕ್ಕೂ ಯಾವ ಸಾಕ್ಷ್ಯಾಧಾರಗಳೂ ಇಲ್ಲ. ಒರಿಯಾ ಭಾಷೆಯ ಕ್ರಮಬದ್ಧವಾದ ವಿಕಾಸವನ್ನು ಕ್ರಿ. ಶ.

ಹನ್ನೆರಡನೆಯ ಶತಮಾನದಷ್ಟು ಹಿಂದಕ್ಕೆ ಹೋಗುವ ಒರಿಯಾ ಭಾಷೆಯ ಶಾಸನಗಳಿಂದ ನಿರೂಪಿಸುವುದು ಸಾಧ್ಯ. ಹದಿನೈದನೆಯ ಶತಮಾನದ ಹೊತ್ತಿಗೆ ಒರಿಯಾ ಭಾಷೆಯು ಇಂದಿನ ಸ್ವರೂಪವನ್ನು ಪಡೆದಿದ್ದಿತು ; ಅಲ್ಲದೆ ಕಾವ್ಯರಚನೆಗೆ ಬೇಕಾದ ಪಕ್ವತೆಯನ್ನೂ ಪಡೆದಿದ್ದಿತು. ಬೇಸಾಯಗಾರನಾದ ಸರಳದಾಸನು ಈ ಭಾಷೆಯನ್ನು ಉಪಯೋಗಿಸಿಕೊಂಡು ಒರಿಯಾ ಭಾಷೆಯಲ್ಲಿ ಸಾಹಿತ್ಯವೆನ್ನಿಸಿಕೊಳ್ಳಬಹುದಾದ ಮೊದಲ ಕೃತಿಗಳನ್ನು ಸೃಷ್ಟಿ ಮಾಡಿದನು. ಅವನ ಪ್ರಮುಖ ಹಿರಿಮೆಯಿರುವುದೂ ಈ ವಿಷಯದಲ್ಲಿ.

ಪ್ರಾಚೀನ ಒರಿಯಾ ಸಾಹಿತ್ಯದಿಂದಾಗಲೀ ಭಾರತದ ಇತರ ಪ್ರಾಂತೀಯ ಸಾಹಿತ್ಯಗಳಿಂದಾಗಲೀ ಯಾವ ವಿಧವಾದ ಪ್ರಭಾವವನ್ನೂ ಸರಳದಾಸನು ಪಡೆಯದೆ ಇದ್ದರೂ, ಸಂಸ್ಕೃತ ಸಾಹಿತ್ಯಕ್ಕೆ ಅನೇಕ ರೀತಿಗಳಲ್ಲಿ ಅವನು ಋಣಿಯಾಗಿದ್ದಾನೆಂಬುದರ ಬಗ್ಗೆ ಸಂದೇಹವಿಲ್ಲ. ಅವನು ತುಂಬವಿನಯಶಾಲಿಯಾದುದರಿಂದ, ಅನೇಕ ಬಾರಿ ಅದನ್ನು ಹೇಳಿಕೊಂಡಿರುವುದರಿಂದ ಕೆಲವರು ಹಿಂದಿನ ವಿದ್ವಾಂಸರು ಅವನಿಗೆ ಸಂಸ್ಕೃತ ಭಾಷೆಯ ಜ್ಞಾನವಿರಲಿಲ್ಲವೆಂದು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಈ ಅಭಿಪ್ರಾಯವನ್ನು ಈಗ ಒಪ್ಪಲು ಸಾಧ್ಯವಿಲ್ಲ. ಅವನ ಕಾವ್ಯಗಳನ್ನು ಆಳವಾಗಿ ಅಭ್ಯಾಸ ಮಾಡಿದರೆ ಆತನ ಸಂಸ್ಕೃತ ಭಾಷಾ ಜ್ಞಾನದ ಬಗ್ಗೆ ಸ್ಪಷ್ಟವಾದ ಚಿತ್ರ ಮೂಡುತ್ತದೆ. ಆದರೆ ಈ ಸಂಸ್ಕೃತ ಜ್ಞಾನವು ವ್ಯವಸ್ಥಿತವಾದ ಯಾರ ಶಿಕ್ಷಣದಿಂದಲೂ ಬಂದದ್ದಲ್ಲವೆಂಬುದೂ ಕಾಣಬರುತ್ತದೆ. ಸಂಸ್ಕೃತದ ಜ್ಞಾನವನ್ನು ಸಂಪಾದಿಸಲು ಸರಳದಾಸನು ತನ್ನ ಕಣ್ಣನ್ನೂ ಕಿವಿಯನ್ನೂ ಸಮರ್ಥವಾಗಿ ಉಪಯೋಗಿಸಿದನು. ಅವನ ಕಾಲದಲ್ಲಿ ಒರಿಸ್ಸಾ ಪ್ರಾಂತದಲ್ಲಿ ವಿದ್ವಾಂಸರಾದ ಬ್ರಾಹ್ಮಣರು ಸಂಸ್ಕೃತದಲ್ಲಿನ ಧಾರ್ಮಿಕ ಗ್ರಂಥಗಳನ್ನು ಪಠನ ಮಾಡಿ ಒರಿಯಾ ಭಾಷೆಯಲ್ಲಿ ಜನರಿಗೆ ವಿವರಿಸುತ್ತಿದ್ದರು. ಗಂಡು ಮಕ್ಕಳಿಲ್ಲದ ಸ್ತ್ರೀಯರು ರಾಮಾಯಣವನ್ನು ಪೂರ್ತಿಯಾಗಿ ಕೇಳಬೇಕೆಂಬ ಬುದ್ಧಿವಾದವನ್ನು ಕವಿ ನೀಡಿರುವುದನ್ನು ನಾವಾಗಲೇ ನೋಡಿದ್ದೇವೆ. ಈ ಕವಿಯ ಕಾಲದಲ್ಲಿ ರಾಮಾಯಣವು ಒರಿಯಾ ಭಾಷೆಯಲ್ಲಿ ರಚಿತವಾಗಿಲ್ಲದೆ ಇದ್ದುದರಿಂದ, ಈ ಹೇಳಿಕೆಯು ಸಂಸ್ಕೃತ ರಾಮಾಯಣವನ್ನು ಕುರಿತದ್ದೆಂಬುದು ಸ್ಪಷ್ಟ. ಕವಿಯು ಹೇಳಿರುವ ಮತ್ತೊಂದು ವಿನೋದ ಪ್ರಸಂಗದ ದೃಷ್ಟಾಂತದಿಂದಲೂ, ವಿದ್ವಾಂಸರಾದ ಬ್ರಾಹ್ಮಣರು ಸಂಸ್ಕೃತ ಪುರಾಣಗಳನ್ನೂ ಕೂಡ ಹೀಗೆಯೇ ಓದಿ ವಿವರಿಸುತ್ತಿದ್ದರೆಂಬುದನ್ನು ಸಮರ್ಥಿಸಬಹುದು. ಶಕುನಿಯ ದುರ್ಬೋಧೆಯಿಂದಾಗಿ ಕೌರವರಲ್ಲಿ ಯಾರೂ ಮಹಾಭಾರತ ಯುದ್ಧವನ್ನು ನಿಲ್ಲಿಸಲು ತಾನು ನೀಡಿದ ಬುದ್ಧಿವಾದವನ್ನು ಕೇಳದೆ ಹೋದುದರಿಂದ, ಧೃತರಾಷ್ಟ್ರನು ತನ್ನನ್ನು ಒಬ್ಬ ಪುರಾಣ ಪ್ರವಚನಕಾರನಿಗೆ ಹೋಲಿಸಿಕೊಂಡು ಶಕುನಿಗೆ ಒಂದು ಕಥೆಯನ್ನು ಹೇಳುತ್ತಾನೆ. ಈ ಕಥೆ ಉದ್ಯೋಗ ಪರ್ವದಲ್ಲಿ ಬರುತ್ತದೆ. ಈ ಕಥೆಯ ಪ್ರಕಾರ ಗೋವಿಂದಪಂಡ ಎಂಬ ಬ್ರಾಹ್ಮಣ ವಿದ್ವಾಂಸನು ಕಳ್ಳರ ಗುಂಪಿನಲ್ಲಿ ತನ್ನ ಪುರಾಣವನ್ನು ಬಿಚ್ಚಿದನು ; ಕಳ್ಳತನ ಮಾಡುವುದರಿಂದ ಉಂಟಾಗುವ ಅನೇಕ

ಪಾಪಗಳನ್ನು ವಿವರಿಸಿದನು ಇವನ ಮಾತುಗಳನ್ನು ಕೇಳಿ ಕಳ್ಳರಿಗೆಲ್ಲ ಎಷ್ಟು ಕ್ರೋಧವುಂಟಾಯಿತೆಂದರೆ, ಅವರು ಅವನ ಬಾಯಿಗೆ ಬಟ್ಟೆಯನ್ನು ಗಿಡಿದು, ಅನೇಕ ರೀತಿಯಲ್ಲಿ ಬೈದು ಓಡಿಸಿಬಿಟ್ಟರು. ಆ ಬಳಿಕ ಕಳ್ಳರಲ್ಲಿ ಒಬ್ಬನು ತನ್ನ ತಲೆಯನ್ನು ಕೆದರಿಕೊಂಡು, ನಾಲಿಗೆಯನ್ನು ಹೊರಚಾಚಿ, ಕುಣಿಯುತ್ತಾ ಅಶ್ಲೀಲವಾದ ಹಾಡೊಂದನ್ನು ಹಾಡಿದನು. ಇದು ಕಳ್ಳರಿಗೆಲ್ಲಾ ಸಂತೋಷವನ್ನುಂಟುಮಾಡಿತು. ಅವರು ಅವನಿಗೆ ವಸ್ತ್ರಗಳನ್ನೂ ಆಭರಣಗಳನ್ನೂ ಬಹುಮಾನವಾಗಿ ಕೊಟ್ಟರು. ಇಲ್ಲಿ ಧೃತರಾಷ್ಟ್ರನು ತನ್ನನ್ನು ಪುರಾಣವನ್ನು ಪಠಿಸಿದ ಬ್ರಾಹ್ಮಣವಿದ್ವಾಂಸ ಗೋವಿಂದಪಂಡನಿಗೆ ಹೋಲಿಸಿಕೊಂಡಿದ್ದಾನೆ. ಶಕುನಿಯನ್ನು ಅಶ್ಲೀಲವಾದ ಹಾಡನ್ನುಹಾಡಿ ಕುಣಿದ ಕಳ್ಳನಿಗೆ ಹೋಲಿಸಿದ್ದಾನೆ ; ಕೌರವರ ಗುಂಪನ್ನು ಕಳ್ಳರ ಗುಂಪಿಗೆ ಹೋಲಿಸಿದ್ದಾನೆ.

ಹೀಗೆ ಸರಳ ಮಹಾಭಾರತದಲ್ಲಿ ಒರಿಸ್ಸಾ ದೇಶದಲ್ಲಿ ಸಂಸ್ಕೃತದಲ್ಲಿನ ಧಾರ್ಮಿಕ ಗ್ರಂಥಗಳ ಪಠನ ಪ್ರವಚನಗಳು ಕವಿಯ ಕಾಲದಲ್ಲಿ ನಡೆಯುತ್ತಿದ್ದುವೆಂಬ ಸೂಚನೆಗಳಿವೆ. ಇವುಗಳಿಂದ ಕವಿಯು ಬಹುವಾಗಿ ಕಲಿತಿರಬೇಕು. ಇವಲ್ಲದೆ ಅವನು ಕೆಲವು ಮುಖ್ಯವಾದ ಸಂಸ್ಕೃತ ಗ್ರಂಥಗಳನ್ನು ಓದಿರಬೇಕು. ಸಂಸ್ಕೃತ ಸಾಹಿತ್ಯದಲ್ಲಿ ಆತನಿಗಿದ್ದ ತಿಳಿವಳಿಕೆಯ ಬಗ್ಗೆ ಈ ಮುಂದೆ ಕೆಲವು ದೃಷ್ಟಾಂತಗಳನ್ನು ಕೊಟ್ಟಿದೆ.

## ಮಹಾಭಾರತ

ಸರಳ ಮಹಾಭಾರತದಲ್ಲಿ ಅನೇಕ ಪ್ರಸಂಗ ಭೇದಗಳು ಕಂಡುಬಂದರೂ ಮೂಲ ಸಂಸ್ಕೃತದ ಮಹಾಭಾರತವನ್ನು ಪೂರ್ತಿಯಾಗಿ ಓದದೆ ಅಥವಾ ಕೇಳದೆ ಆತನು ತನ್ನ ಒರಿಯಾ ಭಾರತವನ್ನು ರಚಿಸಿದನೆಂದು ಕಲ್ಪಿಸುವುದೂ ಅಸಾಧ್ಯ. ಆತನು ಕಲ್ಪಿಸಿರುವ ಪ್ರಸಂಗಾಂತರಗಳು ಅನೇಕ ವೇಳೆ ಬೇಕೆಂದೇ ರಚಿತವಾದವು. ಹೀಗೆ ಕೆಲವು ಭಾಗಗಳನ್ನು ಬಿಟ್ಟಿರುವುದಕ್ಕೂ ಕೆಲವನ್ನು ಹೊಸದಾಗಿ ಸೇರಿಸಿರುವುದಕ್ಕೂ ಕಾರಣಗಳನ್ನು ಮುಂದೆ ತಿಳಿಸಲಾಗುವುದು.

## ರಘುವಂಶ

ಕಾಳಿದಾಸನ ಈ ಪ್ರಸಿದ್ಧ ಕಾವ್ಯದ ಸ್ಪಷ್ಟ ಪ್ರಭಾವವು ಸರಳ ಮಹಾಭಾರತದಲ್ಲಿ ಕಂಡು ಬರುತ್ತದೆ. ರಾಮಾಯಣದ ಕಥೆಯನ್ನು ಅನುಸರಿಸಿ ರಘುವಂಶವು ರಚಿತವಾಗಿದೆಯೆಂಬುದು ಎಲ್ಲರಿಗೂ ತಿಳಿದಿರುವ ವಿಷಯ. ಆದರೂ ರಾಮಾಯಣದ ಕಥೆಯಿಂದ ಅನೇಕ ಮಾರ್ಪಾಟುಗಳನ್ನು ಮಾಡಿಕೊಂಡು, ಸ್ವಂತದ ಅನೇಕ ಹೊಸ ವಿಷಯಗಳನ್ನು ಸೇರಿಸಿ ಕಾಳಿದಾಸನು ರಘುವಂಶವನ್ನು ಬೇರೊಂದು ಸ್ವತಂತ್ರ ಕಾವ್ಯವನ್ನಾಗಿ ಮಾಡಿದ್ದಾನೆ. ಒರಿಯಾ ಮಹಾಭಾರತದಲ್ಲಿ ಸರಳದಾಸನೂ ಇದೇ ಮಾರ್ಗವನ್ನು ಅನುಸರಿಸಿದ್ದಾನೆ. ಒಟ್ಟಿನಲ್ಲಿ ಮೂಲಭಾರತವನ್ನು ಅನುಸರಿಸಿ, ಅನೇಕ ವಿಷಯಗಳನ್ನು ಬಿಟ್ಟು ಮತ್ತೆ ಕೆಲವು ವಿಷಯಗಳನ್ನು ಹೊಸದಾಗಿ ಸೇರಿಸಿ ಸರಳ ಮಹಾಭಾರತವನ್ನು

ಕವಿಯು ಸ್ವತಂತ್ರ ಕಾವ್ಯವನ್ನಾಗಿ ಮಾಡಿದ್ದಾನೆ. ಈ ಎರಡು ಸ್ವತಂತ್ರ ಕಾವ್ಯಗಳಲ್ಲಿ ಇತರ ಕೆಲವು ಸಾಮ್ಯಗಳೂ ಇವೆ. ಕಾಳಿದಾಸನು ತನ್ನ ಕಾವ್ಯದ ನಾಲ್ಕನೆಯ ಸರ್ಗದಲ್ಲಿ ರಘುವನ್ನು ತನಗೆ ತಿಳಿದಿದ್ದ ಎಲ್ಲ ದೇಶಗಳಲ್ಲಿಯೂ ಸುತ್ತಾಡಿಸಿದ್ದಾನೆ. ಹೀಗೆಯೇ ಸಭಾ ಪರ್ವದಲ್ಲಿ ಸರಳದಾಸನು ಪಾಂಡವರನ್ನು ತನಗೆ ತಿಳಿದಿದ್ದ ಎಲ್ಲಾ ದೇಶಗಳಿಗೂ ದಿಗ್ವಿಜಯಕ್ಕಾಗಿ ಕರೆದೊಯ್ದಿದ್ದಾನೆ. ಈ ಕಾವ್ಯದ ಸಭಾಪರ್ವದಲ್ಲಿ ಬರುವ ರಾಜ ಸೂಯ ಯಾಗದ ಸಂದರ್ಭದಲ್ಲಿ ಸರಳದಾಸನು ರಚಿಸಿರುವ ಪಾಂಡವ ದಿಗ್ವಿಜಯದ ವರ್ಣನೆಗೂ ಮೂಲ ಮಹಾಭಾರತದಲ್ಲಿ ಬರುವ ಪಾಂಡವರ ದಿಗ್ವಿಜಯದ ವಿವರಕ್ಕೂ ಯಾವ ಸಂಬಂಧವೂ ಇಲ್ಲ. ಕಾಳಿದಾಸನ ಇಂದುಮತಿ ಸ್ವಯಂವರದ ವರ್ಣನೆಗೂ ಸರಳದಾಸನ ದ್ರೌಪದೀ ಸ್ವಯಂವರದ ವರ್ಣನೆಗೂ ಹಿನ್ನೆಲೆಯ ವಿವರಗಳಲ್ಲಿ ಹತ್ತಿರದ ಸಂಬಂಧವಿದೆ. ಇಂದುಮತಿಯ ಸ್ವಯಂವರದಲ್ಲಿ ಸುನಂದೆಯೆಂಬ ಸಖಿಯು ಇಂದುಮತಿಯನ್ನು ರಾಜರೆಲ್ಲ ಸಭೆಯಲ್ಲಿ ಕುಳಿತಿರುವಲ್ಲಿಗೆ ನೇರವಾಗಿ ಕರೆದೊಯ್ದು ಪ್ರತಿಯೊಬ್ಬ ರಾಜನ ಗುಣಗಳನ್ನೂ ಸಾಮರ್ಥ್ಯವನ್ನೂ ಪರಿಚಯಮಾಡಿಕೊಡುತ್ತಾಳೆ. ಹೀಗೆಯೇ ಸರಳ ಮಹಾಭಾರತದ ದ್ರೌಪದೀ ಸ್ವಯಂವರದಲ್ಲಿ ಕೇಶಿನಿ ಎಂಬ ಸಖಿಯು ದ್ರೌಪದಿಯು ನಿಂತಿದ್ದ ಮುಖ ಮಂಟಪದಿಂದಲೇ ಸಭೆಯಲ್ಲಿ ನೆರೆದಿದ್ದ ಎಲ್ಲ ರಾಜರ ಗುಣಗಳನ್ನೂ ಸಾಮರ್ಥ್ಯವನ್ನೂ ಪರಿಚಯ ಮಾಡಿಕೊಡುತ್ತಾಳೆ. ರಘುವಂಶದಲ್ಲಿ ಬರುವ ರಾಜಸಭೆಯ ವರ್ಣನೆಯು ಸರಳಮಹಾಭಾರತದಲ್ಲಿ ಬರುವ ದ್ರೌಪದೀ ಸ್ವಯಂವರದಲ್ಲಿ ಅನುಕರಣವಾಗುತ್ತದೆ. ಉದಾಹರಣೆಗೆ ಕಾಳಿದಾಸನು ವರ್ಣಿಸಿರುವ ಮಧುರೆಯ ಶೂರಸೇನ ಮಹಾರಾಜನ ಗುಣಗಳ ಮತ್ತು ಸಾಮರ್ಥ್ಯದ ವರ್ಣನೆಯೇ ಸರಳದಾಸನು ವರ್ಣಿಸಿರುವ ಕೃಷ್ಣರಾಜ್ಯದ (ಮಧುರೆಯ) ರಾಜನ ಗುಣಗಳ ಮತ್ತು ಸಾಮರ್ಥ್ಯದ ವರ್ಣನೆಯಲ್ಲಿ ಮರುದನಿ ಕೊಡುತ್ತದೆ.

ರಘುವಂಶದಲ್ಲಿ ರಘು ಮತ್ತು ರಾಮ ಇವರಿಬ್ಬರ ಜನನದ ಕಥೆಯು ಬಂದಿರುವಂತೆಯೇ ಸರಳಮಹಾಭಾರತದಲ್ಲಿಯೂ ಬಂದಿದೆಯೆಂಬುದನ್ನು ಮುಂದೆ ತಿಳಿಸುವ ಹೋಲಿಕೆಯಿಂದ ಸ್ಪಷ್ಟವಾಗಿ ತಿಳಿಯಬಹುದು.

ಕಾಳಿದಾಸನು ತನ್ನ ಕಾವ್ಯದ ಎರಡನೆಯ ಮತ್ತು ಮೂರನೆಯ ಸರ್ಗಗಳಲ್ಲಿ ರಘುವಿನ ಜನನಕ್ಕೆ ಸಂಬಂಧಿಸಿದ ಕಥೆಯನ್ನು ತನ್ನ ಅನನುಕರಣೀಯವಾದ ರೀತಿಯಲ್ಲಿ ವರ್ಣಿಸಿದ್ದಾನೆ. ತನಗೇಕೆ ಮಕ್ಕಳಾಗಲಿಲ್ಲವೆಂದು ದಿಲೀಪನು ವಸಿಷ್ಠನನ್ನು ಕೇಳಿದನು. ಅದಕ್ಕೆ ವಸಿಷ್ಠನು ಹೇಳಿದನು ; ಒಮ್ಮೆ ದಿಲೀಪನು ತನ್ನ ಹೆಂಡತಿ ಸುದಕ್ಷಿಣೆಯು ಬೇಗ ಹಿಂದಿರುಗಬೇಕೆಂದು ಹೇಳಿ ಕಳುಹಿಸಿದ್ದಕ್ಕಾಗಿ, ಸ್ವರ್ಗದಿಂದ ಹಿಂದಿರುಗುತ್ತಿದ್ದಾಗ ಕಲ್ಪ

ತರುವಿನ ನೆರಳಿನಲ್ಲಿ ಮಲಗಿದ್ದ ಕಾಮಧೇನುವಾದ ಸುರಭಿಗೆ ತಕ್ಕ ಗೌರವವನ್ನು ತೋರಿಸಲಿಲ್ಲ. ಕೋಪಗೊಂಡ ಸುರಭಿಯು 'ದಿಲೀಪನಿಗೆ ಮಕ್ಕಳಾಗದಿರಲಿ' ಎಂದು ಶಪಿಸಿತು. ಆದರೆ ಸ್ವರ್ಗದ ನದಿಯಾದ ಮಂದಾಕಿನಿಯಲ್ಲಿ ಸ್ವರ್ಗದ ಆನೆಗಳು ಜಲಕೇಳಿಯಲ್ಲಿ ಮಗ್ನವಾಗಿ ಘೀಳಿಡುತ್ತಿದ್ದುದರಿಂದ ಆ ಶಾಪವು ಅವನಿಗೆ ಕೇಳಿಸಲಿಲ್ಲ. ಆದುದರಿಂದ ಈಗ ಸುರಭಿಯ ಮಗಳಾದ ನಂದಿನಿಯನ್ನು ಭಕ್ತಿಯಿಂದ ಪ್ರಸನ್ನಗೊಳಿಸಿದರೆ ಅವನಿಗೆ ಮಕ್ಕಳಾಗಬಹುದೆಂದು ವಸಿಷ್ಠನು ಸೂಚಿಸಿದನು. ತನ್ನ ಗುರುವಿನ ಉಪದೇಶವನ್ನು ಅನುಸರಿಸಿ ದಿಲೀಪನು ತನ್ನ ಪತ್ನಿಯಾದ ಸುದಕ್ಷಿಣೆಯೊಡನೆ ಸುರಭಿಗೆ ಅನೇಕವಿಧದಲ್ಲಿ ಸೇವೆಯನ್ನು ಸಲ್ಲಿಸಿದನು. ಅಲ್ಲದೆ ಕೈಯಲ್ಲಿ ಬಿಲ್ಲು ಬಾಣಗಳನ್ನು ಹಿಡಿದು ಪ್ರತಿನಿತ್ಯವೂ ಸುರಭಿಯನ್ನು ಅನುಸರಿಸಿ ಕಾಡಿಗೆ ಹೋದನು. ದಿಲೀಪನ ಶ್ರದ್ಧೆಯನ್ನು ಪರೀಕ್ಷಿಸುವುದಕ್ಕಾಗಿ ಒಂದು ದಿನ ಸುರಭಿಯು ಸಿಂಹದ ರೂಪವನ್ನು ತಾಳಿ ತನ್ನನ್ನೇ ಎದುರಿಸಿತು. ಬಿಲ್ಲು ಬಾಣಗಳನ್ನು ಉಪಯೋಗಿಸದೆ ದಿಲೀಪನು ಭಯಂಕರವಾದ ಸಿಂಹಕ್ಕೆ ತನ್ನ ದೇಹವನ್ನೆ ಬಲಿಕೊಡಲು ಒಪ್ಪಿ ಪವಿತ್ರಳಾದ ಸ್ವರ್ಗದ ಸುರಭಿಯನ್ನು ಬಿಟ್ಟುಬಿಡುವಂತೆ ಕನಿಕರದಿಂದ ಸಿಂಹವನ್ನು ಪ್ರಾರ್ಥಿಸಿದನು. ತನ್ನ ರಕ್ಷಣೆಗಾಗಿ ಸ್ವಂತ ದೇಹವನ್ನೇ ಬಲಿಕೊಡಲು ದಿಲೀಪನು ಸಿದ್ಧನಾದುದು ಸುರಭಿಗೆ ತುಂಬ ಸಂತೋಷವನ್ನುಂಟುಮಾಡಿತು. ಕೂಡಲೇ ಸುರಭಿಯು ನಿಜ ಸ್ವರೂಪವನ್ನು ಹೊಂದಿ ರಾಜನಿಗೆ ಮಗನಾಗುವಂತೆ ವರವನ್ನು ನೀಡಿತು. ರಘು ಹುಟ್ಟಿದ್ದು ಹೀಗೆ.

ಸರಳಮಹಾಭಾರತದ ವನಪರ್ವದಲ್ಲಿ ರಾಮಜನನದ ಸಂದರ್ಭದಲ್ಲಿ ಸ್ವಲ್ಪ ವ್ಯತ್ಯಾಸದೊಂದಿಗೆ ಇದೇ ಕಥೆ ಬರುತ್ತದೆ. ದಶರಥನಿಗೆ ಬಹುಕಾಲ ಏಕೆ ಮಕ್ಕಳಾಗಲಿಲ್ಲವೆಂದು ಯುಧಿಷ್ಠಿರನು ಮಾರ್ಕಂಡೇಯ ಮಹರ್ಷಿಯನ್ನು ಕೇಳಿದನು. ಸ್ವರ್ಗದ ಕಾಮಧೇನುವಾದ ಕಪಿಲೆಯು ದಶರಥನಿಗೆ ಶಾಪಹಾಕಿದುದರಿಂದ ಹಾಗಾಯಿತೆಂದು ಮಾರ್ಕಂಡೇಯನು ಹೇಳಿದನು. ಮಾರ್ಕಂಡೇಯನು ಮುಂದುವರಿಸಿ ಹೀಗೆ ಹೇಳಿದನು. ಸ್ವರ್ಗದಲ್ಲಿ ತನ್ನ ಸ್ನೇಹಿತನಾದ ಇಂದ್ರನನ್ನು ಕಂಡು, ತನ್ನ ಎರಡನೆಯ ಹೆಂಡತಿಯೂ ಪ್ರಿಯಳೂ ಆದ ಕೈಕೇಯಿಯ ಆತುರದ ಕರೆಯಿಂದಾಗಿ ಹಿಂದಿರುಗುತ್ತಿದ್ದಾಗ, ರಥದಿಂದ ಹೊರಗೆ ಬಂದಿದ್ದ ಕಾಲು ದಾರಿಯಲ್ಲಿ ಮಲಗಿದ್ದ ಕಪಿಲೆಯ ತಲೆಗೆ ತಗುಲಿತು. ಕೋಪಗೊಂಡ ಕಪಿಲೆಯು ಅವನಿಗೆ ಮಕ್ಕಳಾಗದಿರಲೆಂದು ಶಪಿಸಿತು. ಅದಾದಮೇಲೆ ದಶರಥನು ಅಲ್ಲಿಯೇ ನಿಂತು ಕಪಿಲೆಯನ್ನು ಅನೇಕ ವಿಧದಲ್ಲಿ ಸೇವೆಮಾಡಿ, ಎಲ್ಲ ವಿಧದಲ್ಲಿಯೂ ಅದಕ್ಕೆ ಸುಖವನ್ನುಂಟುಮಾಡಿದನು. ಅದೆಲ್ಲಿ ಹೋದರೆ ಅದರ ಹಿಂದೆ ಹಿರಿದ ಕತ್ತಿ ಹಿಡಿದು ಹಿಂಬಾಲಿಸಿದನು. ದಶರಥನ ಶ್ರದ್ಧೆಯನ್ನು ಪರೀಕ್ಷಿಸುವುದಕ್ಕಾಗಿ ಒಂದು ದಿನ ಕಪಿಲೆಯು ಹುಲಿಯ ರೂಪವನ್ನು ತಾಳಿ ತನ್ನನ್ನೇ ಅಡ್ಡಗಟ್ಟಿತು. ರಾಜನು ಹುಲಿಯ ಎದುರಿಗೆ ಕತ್ತಿ ಹಿಡಿದು ನಿಂತು ಕಪಿಲೆಯನ್ನು ಓಡಿಹೋಗುವಂತೆ ಕೇಳಿಕೊಂಡನು. ಆದರೆ ಕಪಿಲೆಯು ಅದಕ್ಕೆ ಗಮನಕೊಡದೆ ಹುಲ್ಲು ಮೇಯುತ್ತಾ ಇತ್ತು. ಬೇರೆ ಮಾರ್ಗವೇ ಕಾಣದೆ ದಶರಥನು ಭಯಂಕರವಾದ ಹುಲಿಗೆ ತನ್ನ ದೇಹವನ್ನೇ

ಬಲಿಯಾಗಿತ್ತು, ಪಾವನಳಾದ ಕಪಿಲೆಯನ್ನು ಬಿಟ್ಟು ಬಿಡುವಂತೆ ಪ್ರಾರ್ಥಿಸಿದನು. ಈ ಆತ್ಮಾರ್ಪಣೆಯನ್ನು ಕಂಡು ಕಪಿಲೆಗೆ ತುಂಬ ಸಂತೋಷವಾಯಿತು; ನಿಜಸ್ವರೂಪವನ್ನು ಧರಿಸಿ ಆತನು ನಾಲ್ಕು ಗಂಡುಮಕ್ಕಳನ್ನು ಪಡೆಯುವಂತೆ ವರವನ್ನು ಕೊಟ್ಟಿತು. ಋಷ್ಯಶೃಂಗನಿಂದ ಪುತ್ರೇಷ್ಟಿಯಾಗವಾದಮೇಲೆ ರಾಮನೂ ಅವನ ಮೂವರು ತಮ್ಮಂದಿರೂ ಹುಟ್ಟಿದ್ದು ಹೀಗೆ.

ಸರಳದಾಸನು ಈ ಕಥೆಯನ್ನು ರಘುವಂಶದಿಂದ ಸ್ವೀಕರಿಸಿದ್ದಾನೆಂಬ ಬಗ್ಗೆ ಯಾವ ಅನುಮಾನವೂ ಇಲ್ಲ. ಈ ಕಥೆಯನ್ನು ತೆಗೆದುಕೊಂಡಾಗ ಅಲ್ಲಿ ಕಾಳಿದಾಸನು ಮಾಡಿರುವ ತುಂಬ ಸೊಗಸಾದ ವರ್ಣನೆಗಳನ್ನು ಸ್ವೀಕರಿಸಿದನು. ಸುರಭಿಯನ್ನು ಸೇವೆ ಮಾಡುತ್ತಿದ್ದಾಗ ದಿಲೀಪನು ಅದರ ಮೈಯನ್ನು ಸವರಿ ಅಲ್ಲೇನಾದರೂ ತೊಣಚಿಗಳಿದ್ದರೆ ಅದನ್ನು ಓಡಿಸುತ್ತಿದ್ದನು. ಈ ಭಾವನೆಯನ್ನು ಸ್ವೀಕರಿಸಿ ಕಪಿಲೆಯನ್ನು ಸೇವೆ ಮಾಡುತ್ತಿದ್ದಾಗ ಅದು ಮಲಗುವ ಕಡೆಯಲ್ಲಿ ಬತ್ತದ ಹೊಟ್ಟಿನಿಂದ ಹೊಗೆಯನ್ನುಂಟು ಮಾಡುತ್ತಿದ್ದನೆಂದು ಸರಳದಾಸನು ವರ್ಣಿಸುತ್ತಾನೆ. ಬೇಸಾಯಗಾರನಾಗಿದ್ದುದರಿಂದ ಸೊಳ್ಳೆಗಳನ್ನು ತೊಣಚಿಗಳನ್ನು ಓಡಿಸುವ ಬೇರೆ ಉತ್ತಮ ಉಪಾಯ ಸರಳದಾಸನಿಗೆ ಗೊತ್ತಿತ್ತು.

ಸರಳಮಹಾಭಾರತದಲ್ಲಿ ಹೀಗೆ ರಘುವಂಶದ ವರ್ಣನೆಗಳನ್ನೂ ಭಾವನೆಗಳನ್ನೂ ಉಪಯೋಗಿಸಿಕೊಂಡಿರುವ, ಮರುದನಿಕೊಟ್ಟಿರುವ ಇತರ ಕಥಾಭಾಗಗಳೂ ಇವೆ. ರಘುವಂಶದ ಐದನೆಯ ಸರ್ಗದಲ್ಲಿ ರಘುವು ವರತಂತುವಿನ ಶಿಷ್ಯನಾದ ಕೌತ್ಸನನ್ನು ಅವರ ಕ್ಷೇಮ ಸಮಾಚಾರಕ್ಕೆ ಸಂಬಂಧಿಸಿದಂತೆ ಅನೇಕ ಪ್ರಶ್ನೆಗಳನ್ನು ಕೇಳುತ್ತಾನೆ. ತನ್ನ ಗ್ರಂಥದ ಆದಿಪರ್ವದಲ್ಲಿ ಸರಳದಾಸನು ಇದೇ ಪ್ರಶೆಗಳನ್ನು, ವಸಿಷ್ಠ ಮತ್ತು ಗಾಂಧಾರಸೇನರ ಸಂವಾದದಲ್ಲಿ ವಸಿಷ್ಠನು ಕೇಳುವಂತೆ ಮಾಡಿದ್ದಾನೆ. ರಘುವಂಶದ ಹದಿನಾರನೆಯ ಸರ್ಗದಲ್ಲಿ ರಾಜನಾದ ಕುಶನ ಶಯನ ಗೃಹಕ್ಕೆ ಅಯೋಧ್ಯಾಪಟ್ಟಣದ ಅಧಿದೇವತೆಯು ಪ್ರವೇಶಿಸುವ-ನಾಟಕೀಯ ಸನ್ನಿವೇಶವೊಂದನ್ನು ಸೃಷ್ಟಿಸಿದ್ದಾನೆ. ಆಗ ಆಶ್ಚರ್ಯಚಕಿತನಾದ ಕುಶನು ಶಯನಗೃಹಕ್ಕೆ ಪ್ರವೇಶಿಸಿದ ಸ್ತ್ರೀಗೆ ಕೆಲವು ಪ್ರಶ್ನೆಗಳನ್ನು ಕೇಳುತ್ತಾನೆ. ಸರಳದಾಸನು ಈ ಪ್ರಶ್ನೆಗಳಲ್ಲಿ ಕೆಲವನ್ನು, ಇಂಥದೇ ನಾಟಕೀಯ ಸನ್ನಿವೇಶವನ್ನು ಸೃಷ್ಟಿಸಿ, ದುರ್ಯೋಧನನ ಬಾಯಿಯಲ್ಲಿ ಹಾಕಿದ್ದಾನೆ. ದುರ್ಯೋಧನನು ಸೋತು ಹೋದಮೇಲೆ ಅವನ ಶಯನ ಗೃಹಕ್ಕೆ ಸಿರಿದೇವತೆಯಾದ ಲಕ್ಷ್ಮಿಯು ಪ್ರವೇಶಿಸುತ್ತಾಳೆ. ವ್ಯಾಸಸಾರದಲ್ಲಿ ದುರ್ಯೋಧನನನ್ನು ತನ್ನ ತೊಡೆಯಮೇಲೆ ಮಲಗಿಸಿಕೊಂಡು ತನ್ನ ಕಪೋಲಗಳಮೇಲೆ ಕಣ್ಣೀರು ಸುರಿಸುವ ದೃಶ್ಯವಿದೆ.

ಹೀಗೆ ಸರಳಮಹಾಭಾರತದಲ್ಲಿ ರಘುವಂಶದ ಪ್ರಭಾವವು ಸ್ಪಷ್ಟವಾಗಿದೆ.

**ಶ್ರೀಮದ್ಭಗವದ್ಗೀತಾ**

ಸರಳದಾಸನು ತನ್ನ ಮಹಾಭಾರತದಲ್ಲಿ ಈ ಗ್ರಂಥವನ್ನು ಅದು ಬರುವ ಭಾಗದಲ್ಲಿ ಅನುವಾದ ಮಾಡಿಲ್ಲ; ಆದರೆ ಅವನು ಭಗವದ್ಗೀತೆಯನ್ನು ಓದಿರಬೇಕು ಇಲ್ಲ ಕೇಳಿರಬೇಕು ಎಂಬುದು ಆ ಗ್ರಂಥದಲ್ಲಿ ಬರುವ ಕೆಲವು ವಿಷಯಗಳ ನಿರೂಪಣೆಯಿಂದ ಸ್ಪಷ್ಟವಾಗುತ್ತದೆ. ಗೀತೆಯಲ್ಲಿ ಸೊಗಸಾಗಿ ವರ್ಣಿಸಿರುವ ವಿಶ್ವರೂಪವನ್ನು ಅರ್ಜುನನಿಗೆ ಶ್ರೀ ಕೃಷ್ಣನು ಬಾಯಿತೆರೆದು ತೋರಿಸಿದನೆಂಬ ವರ್ಣನೆ ಕರ್ಣಪರ್ವದಲ್ಲಿ ಬರುತ್ತದೆ. ಈ ಎರಡು ಗ್ರಂಥಗಳಲ್ಲಿ ಬರುವ ವಿಶ್ವರೂಪ ವರ್ಣನೆಗಳಲ್ಲಿ ವ್ಯತ್ಯಾಸವಿರುವುದಾದರೂ ಈ ಭಾವನೆಯನ್ನು ಸರಳದಾಸನು ಗೀತೆಯಿಂದ ತೆಗೆದುಕೊಂಡಿದ್ದಾನೆಂಬ ಬಗ್ಗೆ ಅನುಮಾನಕ್ಕೆ ಅವಕಾಶವಿಲ್ಲ.

**ಶ್ರೀಮದ್ಭಾಗವತ ಪುರಾಣ**

ಶ್ರೀ ಕೃಷ್ಣನ ವಂಶವಾದ ಯಾದವ ಕುಲವು ಒಬ್ಬ ಬ್ರಾಹ್ಮಣ ಋಷಿಯ ಶಾಪದಿಂದ ನಾಶವಾಯಿತೆಂಬ ಈ ಪುರಾಣದ ಕಥೆಗೆ ಸ್ವಲ್ಪ ಬೇರೆಯ ವಿಷಯಗಳನ್ನು ಸೇರಿಸಿ, ಹೊಸಕಲ್ಪನೆಗಳನ್ನು ಮೂಡಿಸಿ ಸರಳದಾಸನು ಉಪಯೋಗಿಸಿ ಕೊಂಡಿದ್ದಾನೆ. ಮೂಲದ ಕೆಲವು ಪದ್ಯಗಳನ್ನೂ ಅವನು ಅನುವಾದ ಮಾಡಿದ್ದಾನೆ. ಆದುದರಿಂದ ಮೂಲಸಂಸ್ಕೃತದ ಗ್ರಂಥದ ಪರಿಚಯ ಅವನಿಗೆ ಇದ್ದಿತೆಂಬುದು ಸೂಚಿತವಾಗುತ್ತದೆ.

**ಭಾರತ ಸಾವಿತ್ರಿ**

ಸಂಸ್ಕೃತದಲ್ಲಿರುವ ಈ ಪುಟ್ಟಗ್ರಂಥದ ಕೆಲವು ಪದ್ಯಗಳನ್ನು ಸರಳದಾಸನು ಸರಳಾನುವಾದ ಮಾಡಿದ್ದಾನೆ. ಈ ಸಂಸ್ಕೃತ ಗ್ರಂಥದಲ್ಲಿ ವಿದುರನು ಶ್ರೀಕೃಷ್ಣನನ್ನು ಪ್ರಾರ್ಥಿಸಿ ತನ್ನ ಮನೆಯಲ್ಲಿ ಬ್ರಾಹ್ಮಣರೂ, ಸ್ನೇಹಿತರೂ ಮಕ್ಕಳೂ ತುಂಬಿರುವಂತೆ ವರವನ್ನು ಕೊಡಬೇಕೆಂದು ಪ್ರಾರ್ಥಿಸುತ್ತಾನೆ. ಸರಳಮಹಾಭಾರತದ ಉದ್ಯೋಗ ಪರ್ವದಲ್ಲಿ ವಿದುರನು ಶ್ರೀ ಕೃಷ್ಣನನ್ನು ಇದೇ ವರಗಳನ್ನು ಬೇಡುವ ಕಥೆಯಿದೆ. ಭಾರತ ಸಾವಿತ್ರಿಯಲ್ಲಿ, ಶ್ರೀ ಕೃಷ್ಣನ ಎದುರಿಗೆ ದುರ್ಯೋಧನನು ಪಾಂಡವರಿಗೆ ಸೂಜಿಯ ಮೊನೆಯಷ್ಟು ಭೂಮಿಯನ್ನು ಯುದ್ಧವಿಲ್ಲದೆ ಕೊಡುವುದಿಲ್ಲವೆಂದು ಹೇಳುತ್ತಾನೆ. ಸರಳದಾಸನು ಇದೇ ಪ್ರತಿಜ್ಞೆಯನ್ನು ತನ್ನ ಮಹಾಭಾರತದಲ್ಲಿಯೂ ವರ್ಣಿಸಿದ್ದಾನೆ.

**ಗೀತಗೋವಿಂದ**

ಈ ಸಂಸ್ಕೃತಗ್ರಂಥದ ಪರಿಚಯವು ಸರಳದಾಸನಿಗೆ ಇದ್ದಂತೆ ಕಂಡುಬರುತ್ತದೆ. ಈ ಗ್ರಂಥದಿಂದ ಪದ್ಯಗಳನ್ನೂ ಪದಪುಂಜಗಳನ್ನೂ ಅಡೆತಡೆಯಿಲ್ಲದೆ ತನ್ನ ಮಹಾಭಾರತದಲ್ಲಿ ಉಪಯೋಗಿಸಿರುವುದರಿಂದ ಈ ಅಂಶವು ಸ್ಪಷ್ಟವಾಗುತ್ತದೆ. ಗೀತಗೋವಿಂದದ ಐದನೆಯ ಸರ್ಗದಲ್ಲಿ ರಾಧೆಯ ಸಖಿಯು "ದಂಪತಿಗಳಿಬ್ಬರು ತಮ್ಮ

ತಮ್ಮ ಪ್ರಿಯ ಪ್ರೇಯಸಿಯರನ್ನು ಹುಡುಕಿಕೊಂಡು ರಾತ್ರೆ ಹೊರಹೊರಟು ಕಗ್ಗತ್ತಲಲ್ಲಿ ದಾರಿಕಾಣದೆ ಅಕಸ್ಮಾತ್ ಕೂಡಿ ಸಂಭೋಗದಲ್ಲಿ ನಿರತರಾಗುತ್ತಾರೆ. ಆ ಬಳಿಕವೇ ತಾವು ಗಂಡ ಹೆಂಡಿರೆಂದು ಅವರಿಗೆ ತಿಳಿಯಬರುತ್ತದೆ'' ಎಂಬ ಕಥೆಯನ್ನು ಹೇಳುತ್ತಾಳೆ. ಗೀತಗೋವಿಂದದ ಈ ಪ್ರಸಂಗವನ್ನು. ಅಲ್ಪ ಸ್ವಲ್ಪ ವ್ಯತ್ಯಾಸದೊಡನೆ ದುರ್ಯೋಧನನ ಅಪ್ಪಣೆಯಂತೆ ಪಾಂಡವರ ನಾಶಕ್ಕಾಗಿ ಜತುಗೃಹವನ್ನು ಅಥವಾ ಅರಗಿನ ಅರಮನೆಯನ್ನು ಕಟ್ಟಿದ್ದಾಗ ಅದರಿಂದ ಪಾಂಡವರನ್ನು ಬದುಕಿಸಲು ಸುರಂಗ ವನ್ನು ತೋಡಿದ ಬಾಲ್ಯಕಾರನ ಜನನಕ್ಕೆ ಹೊಂದಿಸಿ ಸರಳದಾಸನು ಹೇಳಿದ್ದಾನೆ.

**ಏಕಾಮ್ರ ಪುರಾಣ**

ಸುಮಾರು ಹದಿನೈದನೆಯ ಶತಮಾನದಲ್ಲಿ ರಚಿತವಾದ ಈ ಸಂಸ್ಕೃತ ಗ್ರಂಥದಲ್ಲಿ ಭುವನೇಶ್ವರ (ಏಕಾಮ್ರ)ದಲ್ಲಿನ ಪ್ರಮುಖ ದೇವಾಲಯಗಳ ಹುಟ್ಟು ಬೆಳವಣಿಗೆ ಗಳನ್ನು ಮತ ಸಂಪ್ರದಾಯದ ದೃಷ್ಟಿಯಿಂದ ವಿವರಿಸುತ್ತದೆ. ಅದರಲ್ಲಿ ಅಲ್ಲಿನ ದೇವತೆ ಗಳನ್ನು ಪೂಜಿಸುವ ಕ್ರಮ, ಉತ್ಸವಗಳನ್ನು ನಡೆಸುವ ವಿಧಿಗಳು ಆಯಾ ದೇವತೆ ಗಳನ್ನು ಪೂಜಿಸುವುದರಿಂದ ದೊರಕುವ ಪುಣ್ಯ ಮುಂತಾದವುಗಳನ್ನು ಹೇಳಿದೆ. ಈ ಗ್ರಂಥದಿಂದ ಸರಳದಾಸನು ಬಹು ಭಾಗಗಳನ್ನು ಸ್ವೀಕರಿಸಿ ತನ್ನ ಸ್ವಂತ ಕಥೆಗಳನ್ನು ರಚಿಸಲು ಉಪಯೋಗಿಸಿಕೊಂಡಿದ್ದಾನೆ. ಅವುಗಳಲ್ಲಿ, ದೃಷ್ಟಾಂತಕ್ಕಾಗಿ ಒಂದು ಕಥೆ ಯನ್ನು ಮುಂದೆ ಹೇಳಿದೆ.

ಏಕಾಮ್ರ ಪುರಾಣದ ಮೂವತ್ತೆರಡನೆಯ ಅಧ್ಯಾಯದಲ್ಲಿ ಭುವನೇಶ್ವರದಲ್ಲಿರುವ ಗೋಕರ್ಣೇಶ್ವರ ವಿಗ್ರಹದ ಮೂಲದ ವಿಚಾರವಾಗಿ ಕಥೆ ವರ್ಣಿಸಲ್ಪಟ್ಟಿದೆ. ಈ ಕಥೆಯ ಪ್ರಕಾರ, ಗವಲನೆಂಬ ದೈತ್ಯನ ಮಗನಾದ ಗೋಕರ್ಣನು ಪ್ರತಿನಿತ್ಯವೂ ಮಧ್ಯಾಹ್ನಕ್ಕೆ ಮುಂಚೆ ಲಿಂಗರಾಜ ದೇವಾಲಯದಿಂದ ಅನತಿದೂರದಲ್ಲಿದ್ದ ಶಿವಲಿಂಗವನ್ನು ಪೂಜಿಸಲು ತನ್ನ ಸ್ವಂತ ಪೂಜಾವಸ್ತುಗಳನ್ನು ತಂದು ಏಕಾಮ್ರದಲ್ಲಿ (ಭುವನೇಶ್ವರ) ಶಿವಪೂಜೆ ಮಾಡಿ ಅದೇ ದಿನ ತನ್ನ ಪ್ರಾಗ್ಜ್ಯೋತಿಷಪುರ(ಅಸ್ಸಾಂ)ಕ್ಕೆ ಹಿಂದಿರುಗುತ್ತಿದ್ದನು. ದ್ರಿಮಿಳನೆಂಬ ದೈತ್ಯನಮಗನಾದ ಸುಶೇಣನೆಂಬ ರಾಕ್ಷಸನು ಇದೇ ಏಕಾಮ್ರಕ್ಕೆ ಪ್ರತಿ ದಿನವೂ ಅಪರಾಹ್ಣದಲ್ಲಿ ಬಂದು ಹಿಂದೆ ಅರ್ಚಿಸಿದ್ದುದನ್ನೆಲ್ಲ ತೆಗೆದೆಸೆದು ತಾನು ತಂದಿದ್ದ ಪೂಜಾದ್ರವ್ಯಗಳಿಂದ ಲಿಂಗವನ್ನು ಪೂಜಿಸಿ ಅದೇದಿನ ವಿಂಧ್ಯ ಪರ್ವತದಲ್ಲಿದ್ದ ತನ್ನ ಮನೆಗೆ ಹಿಂದಿರುಗುತ್ತಿದ್ದನು. ಪ್ರತಿನಿತ್ಯವೂ ತಾನು ಅರ್ಚಿಸಿದ್ದ ಪೂಜಾದ್ರವ್ಯಗಳು ಹೀಗೆ ಚೆಲ್ಲಾಪಿಲ್ಲಿಯಾಗಿ ಬಿದ್ದಿರುತ್ತಿದ್ದುದನ್ನು ಕಂಡ ಗೋಕರ್ಣನು ಒಂದು ದಿನ ಆ ಕಾಡಿನಲ್ಲಿ ಒಂದು ದೊಡ್ಡ ಸೈನ್ಯದೊಡನೆ ಬಚ್ಚಿಟ್ಟುಕೊಂಡಿದ್ದನು. ಸುಶೇಷಣನೂ ಎಚ್ಚರಿಕೆಯಿಂದಿದ್ದು ತಾನು ತನ್ನ ಸೈನ್ಯವನ್ನು ಅಲ್ಲಿಯೇ ಸಿದ್ಧವಾಗಿಟ್ಟಿದ್ದನು. ಅವರಿಬ್ಬರು ಒಬ್ಬರನ್ನೊಬ್ಬರು ಕಂಡಾಗ ದೊಡ್ಡದೊಂದು ಕದನವಾಯಿತು. ಅದರಲ್ಲಿ

ಇಬ್ಬರು ರಾಕ್ಷಸರೂ ಅವರ ಸೈನ್ಯಗಳೂ ನಾಶವಾದುವು. ಈ ಲಿಂಗವು ಮೊದಲು ಗೋಕರ್ಣನಿಂದ ಪೂಜೆಗೊಂಡದ್ದರಿಂದ ಅದಕ್ಕೆ ಗೋಕರ್ಣೇಶ್ವರ ಎಂಬ ಹೆಸರು ಬಂದಿತು.

ಸರಳಮಹಾಭಾರತದ ಮಧ್ಯ ಪರ್ವದಲ್ಲಿ ಬರುವ 'ಕುಂತಿ ಮತ್ತು ಗಾಂಧಾರಿ' ಎಂಬ ಹೆಸರಿನ ಇಂಥದೇ ಕಥೆಯಲ್ಲಿ ಪಾಂಡವರ ತಾಯಿಯಾದ ಕುಂತಿಯು ಗಂಗಾನದಿಯ ದಡದಲ್ಲಿದ್ದ ವಿರಜೇಶ್ವರ ಎಂಬ ಲಿಂಗವನ್ನು ಪೂಜಿಸಲು ಪೂಜಾದ್ರವ್ಯಗಳ ಸಹಿತ ಸೂರ್ಯೋದಯಕ್ಕೆ ಮುಂಚೆ ಬಂದು ಪೂಜಿಸಿ ಅದೇ ದಿನ ಜಯಂತದಲ್ಲಿದ್ದ ತನ್ನ ಮನೆಗೆ ಹಿಂದಿರುಗುತ್ತಿದ್ದಳು ಎಂಬ ಅಂಶ ಬರುತ್ತದೆ. ಆದಾದ ಬಳಿಕ ಕೌರವರ ತಾಯಿಯಾದ ಗಾಂಧಾರಿಯು ಸೂರ್ಯೋದಯವಾದ ಬಳಿಕ ಬಂದು ಹಿಂದೆ ಪೂಜಿಸಿದ್ದ ಪೂಜಾದ್ರವ್ಯ ಗಳನ್ನೆಲ್ಲ ಕಿತ್ತೆಸೆದು ತಾನು ತಂದಿದ್ದ ಪೂಜಾವಸ್ತುಗಳಿಂದ ಪೂಜಿಸಿ ಅದೇ ದಿನ ಹಸ್ತಿನಾ ನಗರದಲ್ಲಿದ್ದ ತನ್ನ ಮನೆಗೆ ಹಿಂದಿರುಗುತ್ತಿದ್ದಳು. ತಾನು ಅರ್ಪಿಸಿದ ಪೂಜಾ ದ್ರವ್ಯಗಳು ಪ್ರತಿದಿನವೂ ಹೀಗೆ ಎಸೆದಿರುತ್ತಿದ್ದುದನ್ನು ಕಂಡ ಕುಂತಿಯು ಒಂದು ದಿನ ಅಲ್ಲಿಯೇ ಬಚ್ಚಿಟ್ಟುಕೊಂಡಿದ್ದಳು. ಗಾಂಧಾರಿಯು ಬಂದಾಗ ಅವರಿಬ್ಬರ ನಡುವೆ ಕೋಪದ ವಾಗ್ವಾದ ನಡೆಯಿತು. ಶಿವನೇ ಪ್ರತ್ಯಕ್ಷನಾಗಿ ಅವರಿಬ್ಬರಿಗೂ ಸ್ವಲ್ಪ ಕಾಲದಲ್ಲಿಯೇ ಒಂದು ಲಕ್ಷ ಚಿನ್ನದ ಸಂಪಿಗೆಯ ಹೂಗಳನ್ನು ತರುವಂತೆ ಹೇಳಿದನು. ಅರ್ಜುನನ ಸಹಾಯದಿಂದ ಕುಂತಿಯು ಅಗತ್ಯವಾದ ಸಂಖ್ಯೆಗಿಂತ ಹೆಚ್ಚಾದ ಸಂಖ್ಯೆಯ ಹೂಗಳನ್ನು ತರುವುದು ಸಾಧ್ಯವಾಯಿತು. ಆದರೆ ಗಾಂಧಾರಿಗೆ ಆಗಲಿಲ್ಲ. ಶಿವನು ಶಿವಲಿಂಗವನ್ನು ಕುಂತಿಯದೆಂದು ತೀರ್ಮಾನ ಮಾಡಿದನು. ಕುಂತಿಯು ಮೊದಲು ಲಿಂಗವನ್ನು ಪೂಜೆ ಮಾಡಿದುದರಿಂದ ಅದಕ್ಕೆ ಕುಂತೀಶ್ವರ ಎಂಬ ಹೆಸರು ಬಂದಿತು.

ಸರಳದಾಸನು ಈ ಕಥೆಯನ್ನು ಏಕಾಮ್ರ ಪುರಾಣದಿಂದ ತೆಗೆದುಕೊಂಡನೆಂಬ ಬಗ್ಗೆ ಯಾವ ಅನುಮಾನವೂ ಇರಲಾರದು. ಅವನಿಗೆ ಅನೇಕ ಸಂಸ್ಕೃತ ನೀತಿ ಶ್ಲೋಕ ಗಳು ಗೊತ್ತಿದ್ದುವು. ಮಹಾಭಾರತದ ಉದ್ದಕ್ಕೂ ಸರಳದಾಸನು ಅವುಗಳನ್ನು ಅನು ವಾದ ಮಾಡಿದ್ದಾನೆ. ಈ ಎಲ್ಲ ವಿಷಯಗಳನ್ನೂ ಗಮನಿಸಿದರೆ ಅವನಿಗೆ ಸಂಸ್ಕೃತದ ಗಾಢವಾದ ಪರಿಚಯವಿದ್ದಿತೆಂಬುದನ್ನು ತೀರ್ಮಾನಿಸುವುದು ಅಗತ್ಯವಾಗುತ್ತದೆ. ಆದರೂ, ಈ ಹಿಂದೆಯೇ ಹೇಳಿರುವಂತೆ, ದಕ್ಷರಾದ ಗುರುಗಳ ಬಳಿ ಕುಳಿತು ವ್ಯವಸ್ಥಿತ ವಾಗಿ ಪಡೆದ ಜ್ಞಾನ ಅದಲ್ಲ ಎಂಬುದೂ ಸರಿ ಎನ್ನಿಸುತ್ತದೆ.

### ಸಂದರ್ಭಗಳು

1. ಪಿ. ಮುಖರ್ಜಿ — ಗಜಪತಿ ಕಿಂಗ್ಸ್ ಆಫ್ ಒರಿಸ್ಸ ಪುಟ 7. ; ಹೆಚ್. ಮೆಹತಾಬ್— ಹಿಸ್ಟರಿ ಆಫ್ ಒರಿಸ್ಸ ಸಂಪುಟ I ಪು. 263

2. ದಿ ಡೆಲ್ಲಿ ಸುಲ್ತಾನೇಟ್ – ಭಾರತೀಯ ವಿದ್ಯಾಭವನ ಪುಟ. 365ff; ಪಿ. ಮುಖರ್ಜಿ – ಗಜಪತಿ ಕಿಂಗ್ಸ್ ಆಫ್ ಒರಿಸ್ಸಾ ಪುಟ 23 ff

3. ಪಿ. ಮುಖರ್ಜಿ – ಗಜಪತಿ ಕಿಂಗ್ಸ್ ಆಫ್ ಒರಿಸ್ಸಾ ಪುಟ. 37

4. ಜರ್ನಲ್ ಆಫ್ ದಿ ಏಷಿಯಾಟಿಕ್ ಸೊಸೈಟಿ ಆಫ್ ಬೆಂಗಾಲ್ – ಸಂಪುಟ LXIX, 1901, ಪುಟ 175.

5. ಕೆ. ಸಿ. ಪಾಣಿಗ್ರಾಹಿ – ಆರ್ಕಿಯಂಲಾಜಿಕಲ್ ರಿಮೈನ್ಸ್ ಆಫ್ ಭುವನೇಶ್ವರ್, ಪುಟ–21, 22, 220–21

# 2. ಕವಿಯ ಮತ
# ಮತ್ತು
# ಮತೀಯ ಅಭಿಪ್ರಾಯಗಳು

ಸರಳದಾಸನು ಸರಳಾದೇವಿಗೆ ಸರ್ವವಿಧದಲ್ಲಿಯೂ ಶರಣಾಗತನಾಗಿದ್ದ ಅತ್ಯಂತ ಶ್ರದ್ಧಾವಂತ ಭಕ್ತನೆಂದು ಆಗಲೇ ಹೇಳಿದೆ. ಆದರೆ ನಿಜವಾದ ಹಿಂದುವಿನಂತೆ ಆವನು ಎಲ್ಲ ಹಿಂದೂ ದೇವತೆಗಳನ್ನೂ ಮತೀಯ ಪಂಗಡಗಳನ್ನೂ ತುಂಬ ಗೌರವದಿಂದಲೂ ಸಹಿಷ್ಣುತೆಯಿಂದಲೂ ಕಾಣುತ್ತಿದ್ದನು. ಸರಳದಾಸನಿಂದ ಸ್ತುತಿಯನ್ನು ಪಡೆಯದ ಯಾವ ಮುಖ್ಯ ಹಿಂದೂ ದೇವತೆಯೂ ಇಲ್ಲವೆಂದೇ ಹೇಳಬಹುದು. ಆತನ ಪ್ರತಿಯೊಂದು ಕಾವ್ಯದ ಪ್ರತಿ ಅಧ್ಯಾಯದ ಕೊನೆಯಲ್ಲಿಯೂ ಒಂದು ವಿಧಿಯ ಹಾಗೆ, ಯಾವುದಾದರೂ ದೇವತೆ ಅಥವಾ ದೇವತೆಗಳನ್ನು ಕುರಿತ ಪ್ರಾರ್ಥನೆಯಿದ್ದೇ ಇರುತ್ತದೆ. ಅಂಥ ದೇವ ದೇವತೆಗಳ ಪಂಕ್ತಿಯಲ್ಲಿ ಸರಳಾದೇವಿಗೆ ಪ್ರಧಾನವಾದ ಸ್ಥಾನವೂ ಪುನರಾವೃತ್ತಿಯೂ ದೊರಕಿರುತ್ತದೆಯೆಂಬುದಂತೂ ನಿಜ. ಅನೇಕ ವೇಳೆ ದೀರ್ಘವಾದ ಕಥಾನಕದ ನಡುವೆ ಕಥೆಯನ್ನು ನಿಲ್ಲಿಸಿ ಮುದ್ರಿತ ಪ್ರತಿಯಲ್ಲಿ ನಾಲ್ಕೈದು ಪುಟಗಳಷ್ಟು ದೀರ್ಘವಾದ ದೇವತಾ ಪ್ರಾರ್ಥನೆಯನ್ನು ಮಾಡಿ ಮತ್ತೆ ಕಥೆಯನ್ನು ಪೂರೈಸಲು ಮುಂದುವರಿಯುತ್ತಾನೆ. ಗ್ರಾಮದೇವತೆಗಳು, ಊರು ಮತ್ತು ಪಟ್ಟಣಗಳ ಅಧಿದೇವತೆಗಳು, ಪವಿತ್ರ ವೃಕ್ಷಗಳು, ನಾಗಗಳು ಇವುಗಳಿಗೂ ಕೂಡ ಬಿಡದೆ ತನ್ನ ಗೌರವವನ್ನು ಸಮರ್ಪಿಸಿದ್ದಾನೆ.

ಎಲ್ಲ ದೇವತೆಗಳಿಗೂ ಎಲ್ಲ ಪಂಥಗಳಿಗೂ ಅವನು ಗೌರವ ತೋರಿಸುವವನಾಗಿದ್ದರೂ ಅವನು ಅನುಮಾನವಿಲ್ಲದೆ ಶ್ರದ್ಧೆಯಿಂದ ಶಾಕ್ತನಾಗಿದ್ದನು. ಅವನ ಮಹಾಭಾರತದ ಪ್ರಾರಂಭದಲ್ಲಿ ಸ್ವಾಮಿ ಜಗನ್ನಾಥನಿಗೆ ಆದ್ಯತೆ ನೀಡಿರುವುದಕ್ಕೆ ಕಾರಣ ಆ ವೇಳೆಗೆ ಎಲ್ಲ ದೇವದೇವತೆಗಳಲ್ಲಿ ಆತನ ಪ್ರಾಧಾನ್ಯವು ನಿರ್ಧಾರವಾಗಿ ಹೋಗಿತ್ತು. ಆದರೂ ಅವನ ಕಾವ್ಯಗಳಲ್ಲಿ ಅವನು ಸೃಷ್ಟಿ ಮತ್ತು ನಾಶದ ಆದ್ಯ ಶಕ್ತಿಯಾದ ಸ್ತ್ರೀ ದೇವತೆಗಳಿಗೇ ಪ್ರಾಧಾನ್ಯವನ್ನಿತ್ತು ತನ್ನ ಎಲ್ಲ ಕಾವ್ಯಗಳಲ್ಲಿಯೂ ಅವರ ಗೆಲುವನ್ನು ಚಿತ್ರಿಸಿದ್ದಾನೆ. ಅವನ ವಿಲಂಕಾರಾಮಾಯಣದಲ್ಲಿ ಸ್ತ್ರೀ ಸೌಂದರ್ಯದ ಪರಮ ಸ್ವರೂಪಳಾದ ಸೀತಾದೇವಿಯೇ ಸಹಸ್ರ ಶಿರ ರಾವಣನನ್ನು ಕೊಂದು ಗಂಡಸಾದ ರಾಮನಿಗಿಂತ ತಾನು ಅಧಿಕಳೆಂಬುದನ್ನು ವಿಜಯಪೂರ್ವಕವಾಗಿ ಸ್ಥಾಪಿಸಿದ್ದಾಳೆ; ಸ್ತ್ರೀಯರಿಗೆ ನಾಶಕಾರಕ ಶಕ್ತಿಯಿಲ್ಲವೆಂದು ರಾಮನು ಪಡೆದಿದ್ದ ಅನುಮಾನವನ್ನು ಹೋಗಲಾಡಿಸಿದ್ದಾಳೆ. ಅವನ ಚಂಡೀಪುರಾಣದಲ್ಲಿ, ಎಲ್ಲ ದೇವತೆಗಳನ್ನು ಸೋಲಿಸಿ ದಮನ ಮಾಡಿದ್ದ ಭಯಂಕರ ರಾಕ್ಷಸನಾದ ಮಹಿಷಾಸುರನನ್ನು ಕೊಂದವಳು ಎಲ್ಲ ದೈವ

ಶಕ್ತಿಯ ಅವತಾರವೂ ಸ್ತ್ರೀ ಸೌಂದರ್ಯದ ಪ್ರತೀಕವೂ ಆದ ದುರ್ಗಾದೇವಿಯೇ: ಅವನ ಮಹಾಭಾರತದಲ್ಲಿ ಸರಳದಾಸನು ಸಂಸ್ಕೃತ ಮೂಲದಿಂದ ಬೇರೆಯಾಗಿ ದ್ರೌಪದಿಯನ್ನೇ ಅಗೋಚರ ಲಯಶಕ್ತಿಯಾಗಿ ಚಿತ್ರಿಸಿದ್ದಾನೆ. ಎಲ್ಲ ಕೌರವರ, ಯುಧಿಷ್ಠಿರನನ್ನು ಬಿಟ್ಟು ಎಲ್ಲ ಪಾಂಡವರ, ಕೃಷ್ಣನೂ ಸೇರಿದಂತೆ ಎಲ್ಲ ಯಾದವರ ನಾಶಕ್ಕೆ ದ್ರೌಪದಿಯೇ ಕಾರ್ಯಮಗ್ನಳಾಗಿದ್ದಾಳೆ. ಅವನ ಮಹಾಭಾರತದ ಕರ್ಣಪರ್ವದಲ್ಲಿ ಸ್ಪಷ್ಟವಾಗಿ ನಿರೂಪಣೆಗೊಂಡಿರುವ ಈ ತತ್ತ್ವವು ಖಚಿತವಾಗಿ ನೂತನವಾದುದು. ಆದರೂ ಪ್ರಪಂಚದ ಸ್ಥಿತಿ ಲಯುಗಳಿಗೆ ಸ್ತ್ರೀಶಕ್ತಿಯೇ ಕಾರಣಳೆಂಬ ಕವಿಯ ದೃಢವಾದ ನಂಬಿಕೆ ಯಿಂದಲೇ ಅದು ಲೇಖನಿಯ ಮೂಲಕ ಕೃತಿಗೆ ಇಳಿದಿದೆ.

ಯುದ್ಧರಂಗದಲ್ಲಿ ಭೀಮನು ದುಶ್ಶಾಸನನನ್ನು ಕೊಂದು ಅವನ ರಕ್ತವನ್ನು ದ್ರೌಪದಿಯ ಕೇಶಪಾಶದ ಮೇಲೆ ಸುರಿದಾಗ ಅವಳಿಗೆ ಪರಮ ತೃಪ್ತಿಯಾಗಿ ತನ್ನ ಅಂತಃಪುರಕ್ಕೆ ತೆರಳಿದಳು. ಶ್ರೀಕೃಷ್ಣನು ಇದೇ ಸರಿಯಾದ ಸಮಯವೆಂದು ತಿಳಿದು ಅವಳು ತನ್ನ ಅಗೋಚರವಾದ ಲಯಶಕ್ತಿಯಿಂದ ಪಾಂಡವರನ್ನೂ ಯಾದವರನ್ನೂ ನಾಶ ಮಾಡದಿರುವಂತೆ ವರವನ್ನು ಬೇಡಲು ಅವಳಲ್ಲಿಗೆ ಭೀಮನನ್ನು ಕಳುಹಿಸಿದನು. ಸ್ತ್ರೀ ಶಕ್ತಿಯ ಸಾಮರ್ಥ್ಯದಲ್ಲಿ ಸ್ವತಃ ಅಹಂಕಾರಿಯಾದ ಭೀಮನಿಗೆ ಅಷ್ಟು ನಂಬಿಕೆಯಿಲ್ಲದಿದ್ದರೂ ಶ್ರೀಕೃಷ್ಣನ ಬುದ್ಧಿವಾದವನ್ನು ಸ್ವೀಕರಿಸಿ ದ್ರೌಪದಿಯ ಹಾಸಿಗೆಯ ಬಳಿ ನಿಂತು ಹೀಗೆ ಬೇಡಿಕೊಂಡನು : "ಎಲೌ, ದೇವತೆಯೇ, ನಿನಗೆ ಪ್ರಿಯವಾದರೆ, ಕೃಷ್ಣನೂ ಸೇರಿದಂತೆ ನಾವೆಲ್ಲರೂ ನಿನ್ನ ಅಗೋಚರವಾದ ಲಯಶಕ್ತಿಯಿಂದ ನಾಶವಾಗದಿರುವಂತೆ ನನಗೆ ವರವನ್ನು ನೀಡು". ಈ ಪ್ರಾರ್ಥನೆಯನ್ನು ಕೇಳಿ ಸ್ತ್ರೀರತ್ನಳಾದ ದ್ರೌಪದಿಯು ಹೇಳಿದಳು : "ನಿನಗೆ ಚಕ್ರಪಾಣಿಯು ಹೇಳಿ ಕಳುಹಿಸಿದ್ದಾನೆ. ನನ್ನ ಹೃದಯೇಶ್ವರನೇ, ಇಂದು ನಿನಗೆ ಸತ್ಯಾಂಶವನ್ನು ಹೇಳುತ್ತೇನೆ. ಶ್ರೀಕೃಷ್ಣನ ವಂಶವೂ ಸೇರಿದಂತೆ ನಿಮ್ಮೆಲ್ಲರನ್ನೂ ನಾನು ಕೊಲ್ಲುತ್ತೇನೆ. ಧರ್ಮಾತ್ಮನಾದ ಯುಧಿಷ್ಠಿರ ಮಾತ್ರ ನನ್ನ ಕೈಯಿಂದ ತಪ್ಪಿಸಿಕೊಂಡು ಸ್ವದೇಹಸಹಿತವಾಗಿ ಸ್ವರ್ಗಕ್ಕೆ ಹೋಗುವನು ಎಂಬುದನ್ನು ಖಂಡಿತವಾಗಿ ತಿಳಿದುಕೋ".

ಹೀಗೆ ಅವನ ಎಲ್ಲ ಕಾವ್ಯಗಳಲ್ಲಿಯೂ ಸ್ತ್ರೀಶಕ್ತಿಯೇ ಏಕಮೇವ ಲಯಶಕ್ತಿಯಾಗಿಯೂ ಪುರುಷರು ಕೇವಲ ಪ್ರೇಕ್ಷಕರಾಗಿಯೇ ಈ ಶಕ್ತಿಯ ಸಹಾಯಕರಾಗಿ ಇರುವಂತೆ ಚಿತ್ರಿಸಲ್ಪಟ್ಟಿದ್ದಾರೆ.

ಭಕ್ತನಾದ ಶಾಕ್ತನಾಗಿ ಸರಳದಾಸನಿಗೆ ರಕ್ತದ ಕೋಡಿ ಹರಿಯುವುದರ ಬಗ್ಗೆ ದ್ವೇಷವಾಗಲಿ ಭಯವಾಗಲಿ ಇರಲಿಲ್ಲ. ಅವನ ಕಾವ್ಯಗಳಲ್ಲಿ ಅವನು ಅನೇಕ ಸಲ ತನ್ನ ಭಕ್ತಿಯ ಆರಾಧ್ಯ ದೇವತೆಯಾದ ಸರಳಾದೇವಿಯನ್ನು ಪ್ರತಿನಿತ್ಯವೂ ಅನೇಕ ಆಡುಗಳು, ಟಗರುಗಳು, ಎಮ್ಮೆಗಳು–ಇವುಗಳ ಬಲಿಯಿಂದ ತೃಪ್ತಿಪಡಿಸುತ್ತಿದ್ದರೆಂದೂ ಪ್ರಾಣಿ ಬಲಿಯಿಂದ ರಕ್ತವನ್ನು ಅರ್ಪಿಸಿ ಆ ದೇವತೆಯನ್ನು ಪ್ರಸನ್ನಳನ್ನಾಗಿಡುತ್ತಿದ್ದರೆಂದೂ

ಹೇಳಿದ್ದಾನೆ. ಅವನ ವಿಲಂಕಾರಾಮಾಯಣದಲ್ಲಿ ಸೀತೆಯನ್ನು ರಕ್ತದಾಹವುಳ್ಳವಳಾಗಿ ಚಿತ್ರಿಸಿಲ್ಲ. ಆದರೆ ಅವಳ ಕಾರ್ಯದಿಂದ ಸಹಸ್ರಶಿರ ರಾವಣನ ಸಾವುಂಟಾಗಿ ರಕ್ತಪಾತ ವಾಯಿತು. ಕವಿಯ ಚಂಡೀಪುರಾಣದ ದುರ್ಗಿಯು ತನ್ನ ದೇಹದಿಂದ ಲಕ್ಷಾಂತರ ಸ್ತ್ರೀ ಸೈನಿಕರನ್ನು ಉತ್ಪತ್ತಿಮಾಡುತ್ತಿದ್ದಳು. ಅವರು ರಕ್ತಮಾಂಸಗಳನ್ನೂ ಎಲುಬು ಮಜ್ಜೆ ಗಳನ್ನೂ ಕಂಡರೆ ತುಂಬಾ ಆಸೆ ಪಡುತ್ತಿದ್ದರು. ಈ ಆಸೆಯನ್ನು ತೀರಿಸಿಕೊಳ್ಳುವುದ ಕ್ಕಾಗಿಯೇ ಆಗಿಂದಾಗ ಅಸಂಖ್ಯಾತ ರಾಕ್ಷಸ ಸೈನಿಕರೊಡನೆ ಕಾದಿ ಅವರನ್ನು ಕೊಲ್ಲು ತ್ತಿದ್ದರು. ದುಶ್ಯಾಸನನ ರಕ್ತವು ಅವಳ ಕೇಶಪಾಶದ ಮೇಲೆ ಸುರಿದಾಗ ದ್ರೌಪದಿಯು ಪರಮ ತೃಪ್ತಿಯನ್ನು ಹೊಂದಿದಳು. ಸರಳದಾಸನ ಮಹಾಕಾವ್ಯಗಳ ಕಥಾನಾಯಕಿಯರು ರಕ್ತಪಾತವನ್ನು ಕಂಡರೆ ತುಂಬ ಭಯಪಡುವ ಸಾಮಾನ್ಯ ಸ್ತ್ರೀ ವ್ಯಕ್ತಿಗಳಲ್ಲ ; ಅವರು ಪ್ರತಿಯೊಬ್ಬರೂ ಶೌರ್ಯವುಳ್ಳವರೂ ಯುದ್ಧಾಸಕ್ತರೂ ಆಗಿದ್ದರು.

ಸರಳದಾಸನು ದೃಢವಾದ ನಂಬಿಕೆಯುಳ್ಳ ಶಾಕ್ತನಾಗಿದ್ದರೂ ತನ್ನ ಕಾವ್ಯ ಗಳಲ್ಲಿ ಇತರ ಎಲ್ಲ ಮತೀಯ ಪಂಗಡಗಳಿಗೂ ಗೌರವವನ್ನು ವ್ಯಕ್ತಪಡಿಸಿದ್ದಾನೆಂದು ಈ ಹಿಂದೆಯೇ ಹೇಳಿದೆ. ಆದರೆ ಅವನ ಈ ಸಾಧಾರಣವಾದ ಮತೀಯ ವ್ಯವಹಾರಕ್ಕೆ ಒಂದು ಅಪವಾದವಿದೆ. ಸಹಜೀಯ ಪಂಥದ ತತ್ವಗಳನ್ನು ಕುರಿತು ಪರಮ ದ್ವೇಷವನ್ನು ತಳೆದಿದ್ದನೆಂಬುದಕ್ಕೆ ಸ್ಪಷ್ಟವಾದ ಸಾಕ್ಷ್ಯಗಳಿವೆ. ಸಹಜೀಯರು ತಾಂತ್ರಿಕರಲ್ಲಿ ತೀವ್ರ ವಾದ ಒಂದು ಗುಂಪಾಗಿದ್ದು ಅವರು ಸಂಭೋಗದಲ್ಲಿ ಯಾವ ವಿಧವಾದ ನಿರೋಧವೂ ಇರಕೂಡದೆಂದು ವಾದಿಸುತ್ತಿದ್ದರು ; ಅಲ್ಲದೆ ತಾವೇ ಅಡೆತಡೆಯಿಲ್ಲದೆ ಆ ರೀತಿಯಲ್ಲಿ ನಡೆದುಕೊಳ್ಳುತ್ತಿದ್ದರು. ಈ ಪಂಗಡವು ಕವಿಯ ವಿಡಂಬನೆಗೆ ಗುರಿಯಾಗಿದೆ. ಈ ಹಿಂದೆ ಗೀತಗೋವಿಂದದ ಐದನೆಯ ಸರ್ಗದಲ್ಲಿ ಬರುವ ಒಂದು ಪ್ರಸಂಗವನ್ನು ಕುರಿತು ಹೇಳಿಯಾಗಿದೆ. ಆ ಪ್ರಸಂಗದಲ್ಲಿ ಗಂಡಹೆಂಡಿರಿಬ್ಬರೂ ತಮ್ಮತಮ್ಮ ಪ್ರೇಯಸೀ ಪ್ರಿಯರು ಗಳನ್ನು ಭೇಟಿಯಾಗಲು ರಾತ್ರಿಯಲ್ಲಿ ಹೊರಹೊರಡುತ್ತಾರೆ. ಕಗ್ಗತ್ತಲೆಯಲ್ಲಿ ದಾರಿ ತಪ್ಪಿ ತಾವೇ ಒಬ್ಬಗೊಬ್ಬರನ್ನು ಸಂಧಿಸುತ್ತಾರೆ. ಕೂಡಲೇ ಸಂಭೋಗದಲ್ಲಿ ನಿರತರಾದ ಅವರಿಗೆ ತಾವಾರೆಂದು ಗೊತ್ತಿರುವುದಿಲ್ಲ. ಸಂಭೋಗ ಕಾಲದಲ್ಲಿ ಪರಸ್ಪರ ಪ್ರೀತಿಯ ನುಡಿಗಳನ್ನು ಆಡಿದಾಗ ತಾವು ಗಂಡಹೆಂಡಿರೇ ಎಂಬುದನ್ನು ಗುರುತಿಸಿಕೊಳ್ಳುತ್ತಾರೆ. ಈ ಪ್ರಸಂಗವನ್ನು ಸರಳದಾಸನು ತನ್ನ ಆದಿ ಪರ್ವದಲ್ಲಿ ಉಪಯೋಗಿಸಿಕೊಂಡು ಸಹ ಜೀಯ ಪಂಗಡದ ಕೃಷ್ಣಸ್ವರೂಪವನ್ನು ಕುರಿತು ವಿಡಂಬನಾತ್ಮಕ ಕಥೆಯೊಂದನ್ನು ರಚಿ ಸಿದ್ದಾನೆ.

ಕಥೆ ಹೀಗಿದೆ : ಒಂದು ದಿನ ರಾಧೆಯು ಒಬ್ಬ ಮುದಿಕುಂಟಣಿಗೆ ತನ್ನ ಸ್ವಂತ ವಸ್ತ್ರಗಳನ್ನು ಉಡಿಸಿ, ಕಿಂಕಿಣಿ ನಾದದ ನೂಪುರದ ಸಹಿತವಾಗಿ ತನ್ನೆಲ್ಲ ಆಭರಣಗಳನ್ನು ತೊಡಿಸಿ, ಶ್ರೀಕೃಷ್ಣನನ್ನು ಕರೆತರಲು ಕಳುಹಿಸಿದಳು. ಕುಂಟಣಿ ಬರುವ ವೇಳೆಗೆ ಶ್ರೀ ಕೃಷ್ಣನು ಕದಂಬ ವೃಕ್ಷದ ಕೊಂಬೆಯ ಮೇಲೆ ಕುಳಿತು ಕಾತುರತೆಯಿಂದ ಕಾಯುತ್ತಾ

ಇದ್ದನು. ಅವಳ ನೂಪುರದ ಕಿಂಕಿಣಿ ನಾದದಿಂದ ಆಕರ್ಷಿತನಾಗಿ, ಕಗ್ಗತ್ತಲಲ್ಲಿ ಅವಳನ್ನೇ ರಾಧೆಯೆಂದು ತಪ್ಪು ತಿಳಿದು ಶ್ರೀಕೃಷ್ಣನು ಕೂಡಲೇ ಕದಂಬ ವೃಕ್ಷದ ಕೊಂಬೆಯಿಂದ ಕೆಳಕ್ಕೆ ಧುಮುಕಿ ಕೂಡಲೇ ಅವಳೊಡನೆ ಸಂಭೋಗದಲ್ಲಿ ನಿರತನಾದನು. ಕಗ್ಗತ್ತಲಿನಲ್ಲಿ ತನ್ನೊಡನಾಡಿಯನ್ನು ಶ್ರೀಕೃಷ್ಣನು ಗುರುತಿಸದಾದನು. ಆದರೆ ಕೊನೆಗೆ ಅವಳು ಮುದಿಕುಂಟಣಿಯೆಂಬುದನ್ನು ತಿಳಿದಾಗ ಅವನ ದುಃಖ ಹೇಳತೀರದಾಯಿತು. ಅವನು ಮನ್ಮಥನನ್ನುಶಪಿಸಿಮುಂದಿನ ತಲೆಮಾರುಗಳು ಅನೀತಿಯ ವ್ಯವಹಾರದಲ್ಲಿವರ್ತಿಸಬಾರದೆಂದು ಎಚ್ಚರಿಕೆ ನೀಡಿದನು. ಮುದಿಕುಂಟಣಿಯು ಈ ದೃಶ್ಯದಿಂದ ತಪ್ಪಿಸಿಕೊಂಡು ಓಡಿ ಹೋದಾಗ ಅವರ ಉಡುಪುಗಳು ಪರಸ್ಪರ ಬದಲಾವಣೆ ಹೊಂದಿದ್ದುದನ್ನು ಕಂಡು ಕೃಷ್ಣನಿಗೆ ಆಶ್ಚರ್ಯವಾಯಿತು. ಮುದಿಕುಂಟಣಿಯು ಅವನ ಬಟ್ಟೆಗಳನ್ನು ಧರಿಸಿ ಅವಳ ಬಟ್ಟೆಗಳನ್ನು ಇವನಿಗೆ ಬಿಟ್ಟು ಹೊರಟುಹೋಗಿದ್ದಳು, ಅವಳ ಸ್ತ್ರೀ ಉಡಿಗೆಗಳನ್ನು ಧರಿಸುವುದಕ್ಕೆ ಹೇಸಿ ಶ್ರೀಕೃಷ್ಣನು ಒಂದು ಬೊಂಬಿನ ಚೂರನ್ನು ಎರಡಾಗಿ ಮಾಡಿ ಅದನ್ನೇ ಕೌಪೀನವನ್ನಾಗಿ ಧರಿಸಿ ತನ್ನ ಮನೆಗೆ ಹಿಂದಿರುಗಿದನು.

ಏತನ್ಮಧ್ಯೆ, ದೂತಿಯು ಅವಳ ವೇಷದಲ್ಲಿಯೇ ಅವಳ ಸಂಭೋಗದ ಎಲ್ಲ ಸಾಕ್ಷ್ಯಗಳನ್ನೂ ಹೊತ್ತು ರಾಧೆಯ ಬಳಿಗೆ ಬಂದಳು. ಈ ವೇಷ ಭೂಷಣಗಳ ಬಗ್ಗೆ ಅವಳು ದೂತಿಯನ್ನು ಕೇಳಿದಾಗ ಅವಳು ಏನೇನೋ ಕಾರಣಗಳನ್ನು ಹೇಳಿ ತಪ್ಪಿಸಿಕೊಂಡಳು. ಮುಗ್ಧಳಾದ ಯುವತಿಯಂತೆ ರಾಧೆಯು ಆ ಕಾರಣಗಳನ್ನು ಕೇಳಿ ಸಮಾಧಾನ ಹೊಂದಿದಳು. ಅಲ್ಲದೆ ತನಗಾಗಿ ಅಷ್ಟೊಂದು ಕಷ್ಟಪಟ್ಟ ದೂತಿಗೆ ತನ್ನ ಸಹಾನುಭೂತಿಯನ್ನು ವ್ಯಕ್ತಪಡಿಸಿದಳು. ಶ್ರೀ ಕೃಷ್ಣನ ಮತ್ತು ಈ ಮುದಿಕುಂಟಣಿಯ ಅನೀತಿಯ ಪ್ರೇಮಪ್ರಸಂಗದ ಪರಿಣಾಮವಾಗಿ ಅವಳಿಗೆ ಕುರೂಪಿಯೂ ಬಕ್ಕತಲೆಯವನೂ ಆದ ಒಬ್ಬ ಮಗನು ಹುಟ್ಟಿದನು. ಈ ಮಗನು ಬಳಿಕ ದರೋಡೆಕೋರನಾಗುವಂತೆ ಶ್ರೀ ಕೃಷ್ಣನೇ ಸಹಾಯ ಮಾಡಿದನು. ಇನ್ನೂ ಕೆಲವು ದಿನಗಳಾದ ಮೇಲೆ ಜತುಗೃಹವು ಬೆಂಕಿಗೆ ಆಹುತಿಯಾದಾಗ ಅದರಿಂದ ಪಾಂಡವರು ತಪ್ಪಿಸಿಕೊಂಡು ಹೋಗುವಂತೆ ಶ್ರೀ ಕೃಷ್ಣನ ಅಪ್ಪಣೆಯಂತೆ ಸುರಂಗಗಳನ್ನು ಕೊರೆದವನೂ ಇವನೇ. ತನ್ನ ತಂದೆಯಾದ ಶ್ರೀಕೃಷ್ಣನ ಅಪ್ಪಣೆಯಂತೆ ಈ ಮಗನು ಕದಂಬ ವೃಕ್ಷದಿಂದ ರಾಧೆಯ ಶಯನ ಗೃಹಕ್ಕೆ ಸುರಂಗವನ್ನು ಕೊರೆದು ಅವರಿಬ್ಬರ ಪ್ರೇಮ ಪ್ರಸಂಗವು ಅಡ್ಡಿಯಿಲ್ಲದಂತೆ ಮುಂದುವರಿಯಲು ಸಹಾಯ ಮಾಡಿದನು.

ಸರಳದಾಸನ ಅನನುಕರಣೀಯವಾದ ಭಾಷೆಯಲ್ಲಿಯೂ ಶೈಲಿಯಲ್ಲಿಯೂ ರಚಿತವಾಗಿರುವ ಈ ಕಥೆಯಲ್ಲಿ ಪ್ರತಿಯೊಂದು ಘಟ್ಟದಲ್ಲಿಯೂ ಹಾಸ್ಯವನ್ನುತ್ಪಾದಿಸುವ ಅನೇಕ ವಿವರಗಳು ತುಂಬಿವೆ. ಪರಸ್ಪರ ವೈಷಮ್ಯದಿಂದ ಕವಿಯು ಈ ಕಥೆಯಲ್ಲಿರುವ ವಿಡಂಬನೆಯ ಮೂಲಗಳನ್ನು ಎತ್ತಿ ತೋರಿಸಿದ್ದಾನೆ. ಕವಿಯು ಚಿತ್ರಿಸಿರುವ ದೂತಿಯು ಮುದುಕಿಯಾದರೂ ತುಂಬ ಸುಂದರ ಸ್ತ್ರೀ. ಅಲ್ಲದೆ ಅವಳಲ್ಲಿ ಗಂಡು ಮಗುವನ್ನು

ಹೆರುವ ಚೈತನ್ಯ ಇನ್ನೂ ಇದೆ. ಅವನು ಚಿತ್ರಿಸಿರುವ ರಾಧೆ, ಕೃಷ್ಣನಿಗೆ ಧರ್ಮಸಂಕಟವನ್ನುಂಟು ಮಾಡುವ ಚಾತುರ್ಯವುಳ್ಳವಳು ; ಆದರೆ ಅವಳೂ ಮುಗ್ಧಳಾದ ಯುವತಿಯಂತೆ ದೂತಿಯು ನೀಡಿದ ವಿವರಣೆಗಳನ್ನು ನಿಜವೆಂದೇ ಒಪ್ಪಿಕೊಳ್ಳುವ ಸರಳ ಸ್ವಭಾವದ ಮಂಕಳು. ಸ್ತ್ರೀಯ ವೇಷ ಭೂಷಣಗಳ ಬಗ್ಗೆ ಶ್ರೀಕೃಷ್ಣನ ಗಂಡಸಿನ ಧೋರಣೆಯನ್ನೂ ಬೊಂಬಿನ ಸೀಳನ್ನು ಕೌಪೀನವನ್ನಾಗಿ ಧರಿಸುವ ಮಂಕನ ನಾಚಿಕೆಯಿಲ್ಲದ ಉಪಾಯದೊಂದಿಗೆ ಪರಸ್ಪರ ವೈಷಮ್ಯವು ಸ್ಪಷ್ಟವಾಗುವಂತೆ ತೋರಿಸಿದ್ದಾನೆ. ಶ್ರೀಕೃಷ್ಣನು ತುಂಬ ಸುಂದರನಾದ ವ್ಯಕ್ತಿಯೆಂದು ರೂಪಿಸಿಕೊಂಡಿದ್ದರೂ ಅವನಿಗೆ ದೂತಿಯಲ್ಲಿ ಹುಟ್ಟಿದ ಮಗನು ಮಾತ್ರ ಕುರೂಪಿಯಾದ ಪ್ರಾಣಿ. ಕವಿಯು ತಂದೆಯೇ ತನ್ನ ಅನೀತಿಯ ಪ್ರೇಮ ವ್ಯವಹಾರಕ್ಕೆ ಮಗನ ಸಹಾಯವನ್ನು ಕೋರಿದನೆಂದೂ ಹೇಳುವಲ್ಲಿ ಈ ವಿಡಂಬನೆಯನ್ನು ಶಿಖರಕ್ಕೆ ಮುಟ್ಟಿಸಿದ್ದಾನೆ.

ಸಹಜೀಯ ಪಂಥದ ತತ್ವಗಳನ್ನು ಅಪಹಾಸ್ಯಕ್ಕೆ ಈಡು ಮಾಡಲು ಕವಿಯು ಈ ಎಲ್ಲ ವೈಷಮ್ಯಗಳನ್ನು ನಮ್ಮ ಮುಂದೆ ಇಟ್ಟಿದ್ದಾನೆ. ಈ ತತ್ವಗಳನ್ನು ಅನುಸರಿಸಿದರೆ ಎಂಥ ವೈಷಮ್ಯದ ಪರಸ್ಪರ ವಿರುದ್ಧ ಪರಿಣಾಮಗಳು ಉಂಟಾಗುತ್ತವೆಂಬುದು ನಮಗೆ ತಿಳಿಯ ಬರುತ್ತದೆ. ಈ ಕಥೆಯಲ್ಲಿ ಕವಿಯು ಶ್ರೀಕೃಷ್ಣನ ಬಾಯಿಯಲ್ಲಿಯೇ ಒಂದು ದೀರ್ಘವಾದ ಹೇಳಿಕೆಯನ್ನು ಮೂಡಿಸಿದ್ದಾನೆ. ಅದರಲ್ಲಿ, ಅನೀತಿಯ ಪ್ರೇಮದಿಂದ ಎಂಥ ಕೆಟ್ಟ ಪರಿಣಾಮವುಂಟಾಗುತ್ತದೆಂದು ವಿವರಣೆಯಿದೆ. ಕವಿಯು ಈ ಸಂದರ್ಭದಲ್ಲಿ ಪ್ರೇಮಕ್ಕೆ ದೇವತೆಯಾದ ಕಾಮಾಕ್ಷಿಗೆ ಒಂದು ದೀರ್ಘವಾದ ಸ್ತುತಿಯನ್ನು ರಚಿಸಿ, ಶ್ರೀಕೃಷ್ಣನು ಮಾಡಿದಂತೆ ಜನರು ಅನೈತಿಕ ಜೀವನ ಮಾರ್ಗದಲ್ಲಿ ನಡೆಯದಂತೆ ಮಾಡಬೇಕೆಂದು ಒಂದು ಪ್ರಾರ್ಥನೆಯನ್ನು ಸಲ್ಲಿಸಿದ್ದಾನೆ. 'ಪ್ರಪಂಚವು ನಾಶವಾಗಬಾರದೆಂಬುದು' ಕವಿಯ ಉದ್ದೇಶ. ಈ ಹೇಳಿಕೆಗಳಿಂದ ಸರಳದಾಸನು ಸಹಜೀಯ ಪಂಥಕ್ಕೆ ವಿರೋಧಿಯಾಗಿದ್ದನೆಂಬುದು ವ್ಯಕ್ತವಾಗುತ್ತದೆ. ಅವರ ತತ್ವಗಳ ಪಾಪಪೂರಿತ ಪರಿಣಾಮಗಳನ್ನು ದೃಷ್ಟಾಂತ ಪಡಿಸುವುದಕ್ಕಾಗಿಯೇ ಈ ಕಥೆಯನ್ನು ಅವನು ರಚಿಸಿದ್ದಾನೆ.

ಅವನ ಮಹಾಭಾರತದ ಕೆಲವರು ದುಷ್ಟ ವ್ಯಕ್ತಿಗಳೂ ಕೂಡ, ಈ ಸಹಜೀಯ ತಾಂತ್ರಿಕರ ಗುಂಪಿನವರಂತಿದ್ದರೆಂದು ಕವಿ ಚಿತ್ರಿಸಿದ್ದಾನೆ. ದುರ್ಯೋಧನನ ಅಪ್ಪಣೆಯಂತೆ ಜತು ಗೃಹವನ್ನು ನಿರ್ಮಾಣ ಮಾಡಿ, ಪಾಂಡವರು ಅಲ್ಲಿ ವಾಸ ಮಾಡುತ್ತಿದ್ದಾಗ ಅದಕ್ಕೆ ಕಿಚ್ಚನ್ನೊಡ್ಡಿದ ಬ್ರಾಹ್ಮಣ ಪುರಂಜನನು ಕವಿಯ ಪ್ರಕಾರ, ಗಂಗಾಸಾಗರ ಸಂಗಮದ ಬಳಿಯಲ್ಲಿ ಗಂಗೆಯ ದಡದಲ್ಲಿದ್ದ ಜ್ಞಾನಪುರದ ನಿವಾಸಿ. ಕವಿಯ ವರ್ಣನೆಯಂತೆ ಆ ಊರಿನಲ್ಲಿ ವಾಸಿಸುತ್ತಿದ್ದ ಜನರೆಲ್ಲ ಕುಜ್ಞಾನಿಗಳು. ಅಂದರೆ ಮಾಟ, ಮಂತ್ರಗಳಲ್ಲಿ ನುರಿತವರು. ಅವರು ಆ ವಿದ್ಯೆಯ ಮೂಲಕ ಜನರನ್ನು ಕೊಲ್ಲುತ್ತಿದ್ದರು. ತಾಂತ್ರಿಕರು ಅವರ ಮಂತ್ರೋಚ್ಚಾರಣೆಯಿಂದಲೂ ಚಿತ್ರಾಕಾರಗಳ ರಚನೆಯಿಂದಲೂ, ಮನುಷ್ಯರನ್ನು ಕೊಲ್ಲುವ ಶಕ್ತಿಯನ್ನು ಹೊಂದಿದ್ದರೆಂದು ನಂಬಿಕೊಂಡಿದ್ದನು. ಮಹಾ

ಭಾರತದಲ್ಲಿ ಬರುವ ಮತ್ತೊಬ್ಬ ದುಷ್ಟ ವ್ಯಕ್ತಿ, ಆರಗಿನ ಮನೆಯನ್ನು ಕಟ್ಟಿದ ಪುರಂಜನನಮಗ ಗೌರಮೋಕ್ಷ, ಇವನೂ ತಾಂತ್ರಿಕನೇ, ಡಾ॥ ಮಾಯಾಧರಮಾನಸಿಂಹ [1] ರು ಸಂಗ್ರಹಿಸಿ ಪ್ರಕಟಿಸಿರುವ 'ನಿಜವಾದ ಮಾವಿನಹಣ್ಣು' ಎಂಬ ಕಥೆಯು ದುಷ್ಟವ್ಯಕ್ತಿ, ಧೂರ್ತ. ಕವಿಯು ಮಹಾಭಾರತದಲ್ಲಿ ಈ ಕಥೆಗಳಲ್ಲಿ ಮತ್ತು ಇತರ ಅನೇಕ ಕಥೆಗಳಲ್ಲಿ ಕಾಣುವ ತಾಂತ್ರಿಕರ ಬಗ್ಗೆಯ ಧೋರಣೆಗಳಿಂದ, ಅವನು ಅವರ ನಂಬಿಕೆಗಳನ್ನಾಗಲೀ ಕದರ್ಯಾಚರಣೆಗಳನ್ನಾಗಲಿ ಸಹಿಸುತ್ತಿರಲಿಲ್ಲವೆಂಬುದು ಸುಸ್ಪಷ್ಟವಾಗುತ್ತದೆ. ಅವನು ಜೈನರನ್ನೂ ಬೌದ್ಧರನ್ನೂ ಕುರಿತು ಏನೂ ಹೇಳಿಲ್ಲ. ಮಹಮ್ಮದೀಯರನ್ನು ಕುರಿತು ಕೆಲವೊಂದು ಮಾತುಗಳನ್ನು ಹೇಳಿರುವುದೇನೋ ಉಂಟು.

### ಸಂದರ್ಭಗಳು

1. ಹಿಸ್ಟರಿ ಆಫ್ ಒರಿಯ ಲಿಟರೇಚರ್, ಸಾಹಿತ್ಯ ಅಕಾದೆಮಿ, ಹೊಸದೆಹಲಿ ಪುಟ. 57

## 3. ಕವಿಯ ಮಹಾಭಾರತ: ಬಿಟ್ಟಿರುವ ಮತ್ತು ಹೊಸದಾಗಿ ಸೇರಿಸಿರುವ ಭಾಗಗಳು.

ಸರಳದಾಸನ ಮಹಾಭಾರತವು ಸಂಸ್ಕೃತ ಮೂಲ ಭಾರತದಿಂದ ಬೇರೆಯಾಗಿದೆಯೆಂದು ಈ ಮುಂಚೆ ಹೇಳಿದೆ. ಈ ಬಿಟ್ಟಿರುವ ಮತ್ತು ಸೇರಿಸಿರುವ ಭಾಗಗಳು ಬಹುಸಂಖ್ಯಾತವಾಗಿರುವುದರಿಂದ ಸೀಮಿತವಾದ ಈ ಪುಸ್ತಕದ ವ್ಯಾಪ್ತಿಯಲ್ಲಿ ಅವನ್ನು ಸಂಪೂರ್ಣವಾಗಿ ವಿವರಿಸುವುದು ಸಾಧ್ಯವಿಲ್ಲ. ದಿವಂಗತ ಪಂಡಿತ ಗೋಪೀನಾಥನಂದಶರ್ಮರು ಸಂಸ್ಕೃತದ ಮಹಾಭಾರತದೊಡನೆ ಇದನ್ನು ಹೋಲಿಸಿ ಇದರಲ್ಲಿರುವ ಬಹುಮುಖ್ಯವಾದ ವ್ಯತ್ಯಾಸಗಳನ್ನು ಕುರಿತು ಒರಿಯಾ ಭಾಷೆಯಲ್ಲಿ ತಕ್ಕಷ್ಟು ಗಾತ್ರವುಳ್ಳ ಒಂದು ಸಂಪುಟವನ್ನು ಪ್ರಕಟಿಸಿದ್ದಾರೆ. ಸರಳದಾಸನು ತನ್ನ ಮಹಾಭಾರತವನ್ನು ಹದಿನೆಂಟು ಪರ್ವಗಳನ್ನಾಗಿ ವಿಂಗಡಿಸುವುದರಲ್ಲಿ ಕೂಡ ಮೂಲ ಮಹಾಭಾರತದ ಸಾಮಾನ್ಯವಾದ ವಿಭಾಗಗಳನ್ನು ಕೂಡ ಅನುಸರಿಸಿಲ್ಲವೆಂದು ತಿಳಿಸಿದ್ದಾರೆ. ಈ ಕೆಳಗೆ ಕೊಟ್ಟಿರುವ ಹೋಲಿಕೆಯಿಂದ ಅದು ಸ್ಪಷ್ಟವಾಗುತ್ತದೆ.

| ಸಂಸ್ಕೃತ ಮಹಾಭಾರತ | ಸರಳ ಮಹಾಭಾರತ |
|---|---|
| 1. ಆದಿಪರ್ವ | 1. ಆದಿಪರ್ವ |
| 2. ಸಭಾಪರ್ವ | 2. ಮಧ್ಯಪರ್ವ |
| 3. ವನಪರ್ವ | 3. ಸಭಾಪರ್ವ |
| 4. ವಿರಾಟಪರ್ವ | 4. ವನಪರ್ವ |
| 5. ಉದ್ಯೋಗಪರ್ವ | 5. ವಿರಾಟಪರ್ವ |
| 6. ಭೀಷ್ಮಪರ್ವ | 6. ಉದ್ಯೋಗಪರ್ವ |
| 7. ದ್ರೋಣಪರ್ವ | 7. ಭೀಷ್ಮಪರ್ವ |
| 8. ಕರ್ಣಪರ್ವ | 8. ದ್ರೋಣಪರ್ವ |
| 9. ಶಲ್ಯಪರ್ವ | 9. ಕರ್ಣಪರ್ವ |
| 10. ಸುಪ್ತಿಕಪರ್ವ | 10. ಶಲ್ಯಪರ್ವ |
| 11. ಸ್ತ್ರೀಪರ್ವ | 11. ಗದಾಪರ್ವ |
| 12. ಶಾಂತಿಪರ್ವ | 12. ಕೈನ್ಯಿಕ ಅಥವಾ ಐಶಿಕ ಪರ್ವ |
| 13. ಆನುಶಾಸನಿಕ ಪರ್ವ | 13. ನಾರೀ ಪರ್ವ |
| 14. ಆಶ್ರಮವಾಸಿಕ ಪರ್ವ | 14. ಶಾಂತಿಪರ್ವ |

| | | | |
|---|---|---|---|
| 15. | ಮಹಾಪ್ರಸ್ಥಾನಿಕ ಪರ್ವ | 15. | ಆಶ್ರಮಿಕಪರ್ವ |
| 16. | ಅಶ್ವಮೇಧಪರ್ವ | 16. | ಅಶ್ವಮೇಧಪರ್ವ |
| 17. | ಮೌಸಲಪರ್ವ | 17. | ಮುಸಲಿಪರ್ವ |
| 18. | ಸ್ವರ್ಗಾರೋಹಣಪರ್ವ | 18. | ಸ್ವರ್ಗಾರೋಹಣಪರ್ವ |

ಈ ಪರ್ವಗಳಲ್ಲಿ– ಅವುಗಳಲ್ಲಿ ಕೆಲವು ಅವನೇ ಸೃಷ್ಟಿಸಿ ಹೆಸರಿಟ್ಟವು – ಸರಳದಾಸನು ಮಹಾಭಾರತದ ಒಟ್ಟುಕಥಾರೂಪರೇಷೆಯನ್ನುಮಾತ್ರ ಅನುಸರಿಸಿ,ಅಲ್ಲಿನ ಅನೇಕ ಪೌರಾಣಿಕ ಕಥೆಗಳನ್ನೂ, ನೀತಿ ಕಥೆಗಳನ್ನೂ,ಘಟನೆಗಳನ್ನೂ, ಕಥಾನಕಗಳನ್ನೂ, ವಿವೇಕದವಾಕ್ಯಗಳನ್ನೂ, ನೈತಿಕ, ಆಧ್ಯಾತ್ಮಿಕ ವಿಷಯಗಳನ್ನೂ ವಾದವಿವಾದಗಳನ್ನೂ ಬಿಟ್ಟು ಬಿಟ್ಟಿದ್ದಾನೆ. ತುಂಬ ಆಧ್ಯಾತ್ಮಿಕವಾದ ಅಥವಾ ಅತೀಂದ್ರಿಯವಾದ ಮೂಲದ ಚರ್ಚೆಗಳನ್ನೂ ಅವುಗಳು ಬರುವ ಕಥೆಗಳನ್ನೂ ತುಂಬ ಎಚ್ಚರಿಕೆ ವಹಿಸಿ ಕೈಬಿಟ್ಟಿದ್ದಾನೆ. ಶ್ರೀಮದ್ಭಗವದ್ಗೀತೆಯನ್ನು ಎರಡು ಪದ್ಯಗಳಲ್ಲಿ ಮಾತ್ರ ಸೂಚಿಸಿ ಸಂಪೂರ್ಣವಾಗಿ ಕೈಬಿಟ್ಟಿದ್ದಾನೆ. ಶಾಂತಿಪರ್ವದಲ್ಲಿ ಭೀಷ್ಮನು ಯುಧಿಷ್ಠಿರನಿಗೆ ಬೋಧಿಸಿದ ದೀರ್ಘವಾದ ಉಪನ್ಯಾಸವನ್ನು ಸಂಪೂರ್ಣವಾಗಿ ಬಿಟ್ಟು ಅದರ ಸ್ಥಾನದಲ್ಲಿ ತನ್ನದೇ ಆದ ಸಣ್ಣ ಬೋಧೆಯೊಂದನ್ನು ಸೇರಿಸಿದ್ದಾನೆ. 15000 ಪದ್ಯಗಳುಳ್ಳ ಆತನ ಮಧ್ಯಪರ್ವವು ನಿಜವಾಗಿ ಒಂದು ಹೊಸಪರ್ವವೇ ! ಅದರಲ್ಲಿ ಮೂಲ ಸಂಸ್ಕೃತ ಭಾರತದ ಆದಿಪರ್ವದ ಕೆಲವು ವಿಷಯಗಳು ಸೇರಿರುವುದು ನಿಜ. ಮೂಲ ಭಾರತದ ಸಭಾ ಪರ್ವದಲ್ಲಿ ಪಾಂಡವರು ರಾಜಸೂಯ ಯಾಗವನ್ನು ಮಾಡಿದ ಸಂದರ್ಭದಲ್ಲಿ ಅವರು ಮಾಡಿದ ದಿಗ್ವಿಜಯದ ವರ್ಣನೆಯು 218 ಪದ್ಯಗಳಲ್ಲಿ ವರ್ಣಿತವಾಗಿದೆ. ಆದರೆ ಇದೇ ಸಂದರ್ಭವನ್ನು ವರ್ಣಿಸಲು ಸರಳದಾಸನ ಸಭಾಪರ್ವದಲ್ಲಿರುವ ಹದಿಮೂರು ಸಾವಿರ ಪದ್ಯಗಳಲ್ಲಿ ಬಹುಪಾಲು ಈ ದಿಗ್ವಿಜಯದ ವರ್ಣನೆಗೇ ಮೀಸಲಾಗಿದೆ. ಸರಳ ಮಹಾಭಾರತದ ವನಪರ್ವದಲ್ಲಿ ಮೂಲಮಹಾಭಾರತದಲ್ಲಿ ಬರುವ ಇಪ್ಪತ್ತು ದೀರ್ಘವಾದ ಉಪಾಖ್ಯಾನಗಳನ್ನು ಬಿಟ್ಟು ಈ ಕವಿಯು ಸ್ವಕಪೋಲ ಕಲ್ಪಿತವಾದ 24 ಹೊಸ ಉಪಾಖ್ಯಾನಗಳನ್ನು ಸೇರಿಸಲಾಗಿದೆಯೆಂದು ಪಂಡಿತ ನಂದಶರ್ಮರು ತೋರಿಸಿಕೊಟ್ಟಿದ್ದಾರೆ. ಮೂಲಮಹಾಭಾರತದ ಶಾಂತಿಪರ್ವ ಮತ್ತು ಅನುಶಾಸನಿಕ ಪರ್ವಗಳಲ್ಲಿ ಬರುವ ಬಹುವಾಗಿ ವಾದವಿವಾದಗಳಿಂದ ಕೂಡಿರುವ 44 ಉಪಾಖ್ಯಾನಗಳನ್ನು ಸರಳದಾಸನು ಕೈಬಿಟ್ಟಿದ್ದಾನೆಂಬುದನ್ನೂ ಅವರು ತೋರಿಸಿಕೊಟ್ಟಿದ್ದಾರೆ.

ಕೌರವರೂ ಪಾಂಡವರೂ ವಾಸಮಾಡುತ್ತಿದ್ದರೆಂಬ, ಇಂದಿನ ದೆಹಲಿಯ ಸುತ್ತಮುತ್ತಲಿನ ಹಸ್ತಿನಾನಗರವನ್ನು ಕವಿಯು ಕೆಲವು ವೇಳೆ ಅಲಕ್ಷಿಸುತ್ತಾನೆ. ಮೂಲಮಹಾಭಾರತದಲ್ಲಿ ಪಾಂಡವರು ಹಿಮಾಲಯಕ್ಕೆ ಅವರ ಅಂತ್ಯ ಪ್ರಯಾಣವನ್ನು ಕೈಗೊಂಡು, ಅದರಲ್ಲಿ ಯುಧಿಷ್ಠಿರನನ್ನು ಬಿಟ್ಟು ಮಿಕ್ಕೆಲ್ಲರೂ ಅವಸಾನ ಹೊಂದಿದರೆಂಬ ಕಥೆಯನ್ನು

ಪ್ರಾರಂಭಿಸುವುದಕ್ಕೆ ಮುಂಚೆ ಅವನು ಒರಿಸ್ಸಾ ಪ್ರಾಂತಕ್ಕೆ ಕರೆತರುತ್ತಾನೆ. ಈ ಕೊನೆಯ ಪ್ರಯಾಣಕ್ಕೆ ಮುಂಚೆ ಅವರು ಒರಿಸ್ಸಾದಲ್ಲಿಯೇ ಇರುವ ಭುವನೇಶ್ವರ, ಪೂರಿ, ಕೋನಾರ್ಕ, ಕಟಕ್, ಕಪಿಲಾಸ, ಅಮರಾವತಿ, ಜಾಜಪುರ, ಎಂಬ ಊರುಗಳಿಗೆ ಹೋಗಿ ಅಲ್ಲಿನ ಸ್ಥಳಾಧಿದೇವತೆಗಳಿಗೆ ಅವರ ಪೂಜೆಯನ್ನು ಸಲ್ಲಿಸುತ್ತಾರೆ. ಕಟಕ್ ನಗರದಿಂದ 12 ಮೈಲಿ ದೂರದಲ್ಲಿರುವ ಅಮರಾವತಿಯಲ್ಲಿನ ಹರಿಸಾಹು ಎಂಬ ವೈಶ್ಯನ ಮಗಳಾದ ಸುಹಾನಿ ಎಂಬ ಯುವತಿಯೊಡನೆ ಮುದಿರಾಜನಾದ ಯುಧಿಷ್ಠಿರನ ಮದುವೆಯನ್ನು ಕವಿಯು ನೆರವೇರಿಸುತ್ತಾನೆ. ಆದರೆ ಆ ಮಹಾಪ್ರಸ್ಥಾನದ ಜೊತೆ ಯಲ್ಲಿ ಅವಳನ್ನು ಸೇರಿಸುವುದಿಲ್ಲ. ಈ ಮಹಾಪ್ರಸ್ಥಾನವನ್ನು ಹಿಮಾಲಯದಲ್ಲಿ ಪೂರೈಸುವುದಕ್ಕೆ ಮುಂಚೆ ಪಾಂಡವರನ್ನು ಗಯಾ ಮತ್ತು ಪ್ರಯಾಗ ಕ್ಷೇತ್ರಗಳ ಮೂಲಕ ಹಾದು ಹೋಗುವಂತೆ ಮಾಡುತ್ತಾನೆ. ಕವಿಯು ವರ್ಣಿಸಿರುವ ಸ್ಥಳಗಳ ದಿಕ್ಕು ಗಳನ್ನು ಸೂಚಿಸುವಾಗ ಆತನು ಕೆಲವು ವೇಳೆ ದೆಹಲಿಯನ್ನೂ ಮತ್ತೆ ಕೆಲವು ವೇಳೆ ಒರಿಸ್ಸಾ ದೇಶವನ್ನೂ ತನ್ನ ದಿಕ್ಸೂಚಿಯ ಕೇಂದ್ರವನ್ನಾಗಿ ಮಾಡಿಕೊಳ್ಳುವುದರಿಂದ ಕವಿಯು ನೀಡುವ ದಿಕ್ಕುಗಳು ಕೆಲವು ವೇಳೆ ಪರಸ್ಪರ ವಿರುದ್ಧವಾಗಿರುವಂತೆ ಕಂಡು ಬರುತ್ತವೆ.

ಈ ಪುಟ್ಟ ಗ್ರಂಥದಲ್ಲಿ ಎರಡು ಮಹಾಭಾರತಗಳಲ್ಲಿರುವ ವ್ಯತ್ಯಾಸದ ವಿಸ್ತಾರ ವನ್ನು ವಿವರಿಸಿ ಅದನ್ನು ಹೊರೆಯನ್ನಾಗಿ ಮಾಡುವುದು ನಮಗಿಷ್ಟವಿಲ್ಲ. ಇಲ್ಲಿಯವರೆಗೆ ಹೇಳಿರುವುದೆಲ್ಲದರಿಂದ ಸರಳದಾಸನ ಮಹಾಭಾರತವು ಮೂಲ ಸಂಸ್ಕೃತ ಮಹಾಭಾರತ ವನ್ನು ಅನುಸರಿಸಿದ್ದರೂ ಅದೇ ಬೇರೆಯ ವೈವಿಧ್ಯವುಳ್ಳ ಗ್ರಂಥವಾಗಿದೆಯೆಂಬ ಅಭಿ ಪ್ರಾಯವನ್ನು ಓದುಗನು ಪಡೆಯಬಹುದು. ಇಲ್ಲಿ ನಮ್ಮ ಮುಂದಿರುವ ಪ್ರಶ್ನೆ — ಈ ಸರಳಮಹಾಭಾರತವು ಮೂಲದಿಂದ ಏಕೆ ಬೇರೆಯಾಗಿದೆ ಎಂಬುದು. ಕೆಲವರು ವಿದ್ವಾಂಸರು ಕೊಡುವ ಕಾರಣ ಕವಿಗೆ ಸಂಸ್ಕೃತ ಭಾಷೆಯ ತಿಳಿವಳಿಕೆಯಿರಲಿಲ್ಲವೆಂಬುದು. ಆದರೆ ನಾವೀಗಾಗಲೆ ಸರಳದಾಸನಿಗೆ ಸಂಸ್ಕೃತ ಭಾಷಾ ಜ್ಞಾನವು ಸಾಕಷ್ಟಿತ್ತೆಂಬುದನ್ನು ಬೇಕಾಗಿದ್ದರೆ ಮೂಲ ಭಾರತವನ್ನು ಅವನು ಅನುವಾದ ಮಾಡಲಾಗದಿದ್ದರೂ ಸಂಪೂರ್ಣವಾಗಿ ಅನುಸರಿಸಬಹುದಾಗಿತ್ತೆಂಬುದನ್ನೂ ತೋರಿಸಿಕೊಟ್ಟಿದ್ದೇವೆ. ಮಹಾ ಭಾರತದ ಬಗ್ಗೆ ಸರಳದಾಸನ ಸ್ವಂತ ಅಭಿಪ್ರಾಯವೇನೆಂಬುದನ್ನು ಗಮನಿಸಿದರೆ ಮೂಲ ಮಹಾಭಾರತವನ್ನು ಹೀಗೆ ತಿರುಚು ಮುರುಚು ಮಾಡುವುದಕ್ಕೂ ಸಂಪ್ರದಾಯವನ್ನು ಬಿಡುವುದಕ್ಕೂ ಇರುವ ಕಾರಣ ಗೊತ್ತಾಗುತ್ತದೆ. ಅವನ ಅಭಿಪ್ರಾಯದಂತೆ ಮಹಾ ಭಾರತ ಯುದ್ಧವು ಒಮ್ಮೆ ನಡೆಯಲಿಲ್ಲ ; ಎಪ್ಪತ್ತು ಮೂರು ಸಲ ನಡೆಯಿತು. ಪ್ರತಿ ಸಲವೂ ಕುರುಕ್ಷೇತ್ರವೇ ರಣರಂಗವಾಗಿತ್ತು ; ಅಲ್ಲಿ ಕುಂಟನಿಯು ಬತ್ತಲೆಯಾಗಿ ಆವೇಶದಿಂದ ನರ್ತಿಸಿದಳು. ಇತರ ಪ್ರದೇಶಗಳಲ್ಲಿಯೂ ಕಾಲಗಳಲ್ಲಿಯೂ ಆದ ಯುದ್ಧ ಗಳೆಲ್ಲಾ ಈ ಮಹಾಭಾರತ ಯುದ್ಧಗಳ ಪರಿಣಾಮಗಳು. ಕವಿಯು ಈ ಅಭಿಪ್ರಾಯ

ವನ್ನು ಸಭಾಪರ್ವದಲ್ಲಿ ಅಗಸ್ತ್ಯಿಯ ಬಾಯಲ್ಲಿ ಹೇಳಿಸಿದ್ದಾನೆ; ಉದ್ಯೋಗಪರ್ವದಲ್ಲಿ ಮತ್ತೆ ಇದನ್ನೇ ಒಂದು ನರಿಯ ಬಾಯಲ್ಲಿಯೂ ಹೇಳಿಸಿದ್ದಾನೆ. ಚಂಡೀಪುರಾಣದಲ್ಲಿ ದುರ್ಗಿಗೆ ಪೃಥ್ವೀದೇವತೆಯು ಮಹಾಭಾರತ ಯುದ್ಧವು ಮತ್ತೆ ಮತ್ತೆ ನಡೆಯಿತೆಂದು ಹೇಳುತ್ತಾಳೆ. ಇದು ನಿಸ್ಸಂದೇಹವಾಗಿ, ಸಂಪ್ರದಾಯ ವಿರುದ್ಧವಾದ ಅಭಿಪ್ರಾಯ; ಯಾವ ಪ್ರಾಚೀನ ಅಧಿಕಾರ ವಾಣಿಯೂ ಇದನ್ನು ಒಪ್ಪುವುದಿಲ್ಲ. ಆದರೆ ತನ್ನ ಸ್ವಂತ ಅಭಿಪ್ರಾಯಕ್ಕೆ ಅನುಸಾರವಾಗಿ ಸರಳದಾಸನು ತನ್ನ ಮಹಾಭಾರತದಲ್ಲಿ ತನಗೆ ತಿಳಿದುಬಂದಿದ್ದ ಪ್ರಾಚೀನವಾದ ಮತ್ತು ಅರ್ವಾಚೀನವಾದ ಎಲ್ಲ ಘಟನೆಗಳನ್ನೂ ಸೇರಿಸಿ ಅವುಗಳನ್ನು ತನ್ನ ರೀತಿಯ ಪೌರಾಣಿಕ ವಾತಾವರಣದಲ್ಲಿ ಚಿತ್ರಿಸಿದ್ದಾನೆ. ಅವನು ತನ್ನ ಮಹಾಭಾರತವನ್ನು ಎಲ್ಲ ಜ್ಞಾನದ ಒಂದು ವಿಶ್ವಕೋಶವನ್ನಾಗಿ ಮಾಡಿದ್ದಾನೆ — ಮೂಲಮಹಾಭಾರತದಂತಲ್ಲ, ಆದರೆ ಅವನು ಗ್ರಂಥ ರಚನೆ ಮಾಡುತ್ತಿದ್ದ ಸಮಯದಲ್ಲಿ ತನಗೆ ದೊರಕಿದ ರೀತಿಯಲ್ಲಿ! ಮೂಲಮಹಾಭಾರತದಷ್ಟೇ ಗಾತ್ರದ ಗ್ರಂಥವನ್ನಾಗಿ ತನ್ನ ಮಹಾಭಾರತವನ್ನು ಮಾಡುವಲ್ಲಿ ಮೂಲದಿಂದ ಬಿಟ್ಟ ಅಥವಾ ಬೇರೆಯಾಗಿ ನಿರೂಪಿಸಿದುದರಿಂದ ಉಳಿತಾಯವಾದ ಅವಕಾಶವನ್ನೆಲ್ಲ ಸ್ವಕಪೋಲ ಕಲ್ಪಿತವಾದ ವಿವಿಧ ವಿಷಯಗಳಿಂದ ಕವಿಯು ತುಂಬಿದ್ದಾನೆ. ಆವನಿಗೆ ಗೊತ್ತಿದ್ದ ಚರಿತ್ರೆಯನ್ನೂ ಅವನು ಪೌರಾಣಿಕ ಕಥೆಯನ್ನಾಗಿ ಮಾರ್ಪಡಿಸಿದನು ಎಂಬುದಕ್ಕೆ ಕೆಲವು ದೃಷ್ಟಾಂತಗಳನ್ನು ಕೊಡಬಹುದು.

ದಖನ್ನಿನ ಪ್ರಸಿದ್ಧವಾದ ಬಹಮನಿ ರಾಜ್ಯದ ಪ್ರತಿಷ್ಠಾಪಕನಾದ ಹಸನ್‌ಗಂಗೂ ಎಂಬಾತನ ಬಾಲ್ಯ ಜೀವನದ ಬಗ್ಗೆ ಫಿರಿಷ್ಟ ಎಂಬ ಚರಿತ್ರಕಾರನು ಈ ಕೆಳಗೆ ಹೇಳಿರುವ ಕಥೆಯನ್ನು ದಾಖಲಿಸಿದ್ದಾನೆ.

"ರಾಜಕುಮಾರನಾದ ಮಹಮ್ಮದ್ ತೊಗಲಕ್‌ನ ಪ್ರೀತಿ ವಿಶ್ವಾಸಗಳನ್ನು ಗಳಿಸಿದ ಬ್ರಾಹ್ಮಣ ಜ್ಯೋತಿಷ್ಯನಾದ ಗಂಗೂ ಎಂಬಾತನ ಹತ್ತಿರ ಹಸನ್ ಎಂಬ ದೆಹಲಿಯ ನಿವಾಸಿಯಾದ ಒಬ್ಬ ಸೇವಕನಿದ್ದನು. ಹಸನ್ನನ ಒಳ್ಳೆಯ ನಡವಳಿಕೆಯಿಂದ ಪ್ರೇರಿತನಾಗಿ ಅವನ ಯಜಮಾನನು ಅವನಿಗೆ ಒಂದು ಜೊತೆ ಎತ್ತುಗಳನ್ನಿತ್ತು ಸ್ವಲ್ಪ ಭೂಮಿಯನ್ನೂ ಕೊಟ್ಟು ಸ್ವಂತ ಜಮೀನನ್ನಾಗಿ ಉಪಯೋಗಿಸಿಕೊಳ್ಳಬಹುದೆಂದು ಹೇಳಿದನು. ಹೀಗೆ ಅವನು ಜಮೀನನ್ನು ಉಳುತ್ತಿದ್ದಾಗ ನೇಗಿಲಿನ ತುದಿಗೆ ಏನೋ ಸಿಕ್ಕಿಕೊಂಡಂತಾಯಿತು. ಅದನ್ನು ಪರಿಶೀಲಿಸಿದಾಗ ಅದು ಒಂದು ಸರಪಣಿಯೆಂದೂ ಆ ಸರಪಣಿಯು ಪ್ರಾಚೀನ ಕಾಲದ ಚಿನ್ನದ ನಾಣ್ಯಗಳಿಂದ ತುಂಬಿದ ಒಂದು ತಾಮ್ರದ ಕೊಡಕ್ಕೆ ಕಟ್ಟಿದ್ದಿತೆಂದೂ ಗೊತ್ತಾಯಿತು. ಈ ವಿಚಾರವನ್ನು ಕಂಡುಹಿಡಿದ ಕೂಡಲೆ ಹಸನ್‌ನು ಆ ನಿಧಿಯನ್ನೂ ತನ್ನ ಒಡೆಯನ ಬಳಿಗೆ ಒಯ್ದು ಕೊಟ್ಟನು. ಹಸನ್ನನ ಪ್ರಾಮಾಣಿಕತೆಯನ್ನು ಮೆಚ್ಚಿ ಈ ವಿಚಾರವನ್ನು ಅವನು ರಾಜಕುಮಾರನಾದ ಮಹಮ್ಮದ್ ತೊಗಲಕನಿಗೆ ಹೇಳಿದನು. ಅವನು ರಾಜನಾದ ತನ್ನ ತಂದೆಗೆ ಈ ವಿಷಯವನ್ನು ತಿಳಿಸಿದನು. ರಾಜನು

ಹಸನ್ನನನ್ನು ತನ್ನ ದರಬಾರಿಗೆ ಕರೆಸಿ ಅವನಿಗೆ ನೂರು ಕುದುರೆಗಳ ಸರದಾರಿಕೆಯನ್ನಿತ್ತನು. [1]

ಈ ಸಾಧಾರಣ ಅಧಿಕಾರದಿಂದ ಹಸನ್ನನು ರಾಜನ ಸೇವೆಯಲ್ಲಿ ಉನ್ನತ ಸ್ಥಾನವನ್ನು ಗಳಿಸಿದನು ; ಕೊನೆಗೆ ಕ್ರಿ.ಶ. 1347 ರಲ್ಲಿ ದಖ್ಖನಲ್ಲಿ ಪ್ರಸಿದ್ಧವಾದ ಬಹಮನೀ ರಾಜ್ಯವನ್ನು ಸ್ಥಾಪಿಸಿದನು. ಸರಳದಾಸನು ಈ ಕಥೆಯನ್ನು ಎಲ್ಲಿಯೋ ಕೇಳಿರಬೇಕು, ಅದನ್ನು ಸ್ವಲ್ಪ ರೂಪಾಂತರಿಸಿ ಮಹಾಭಾರತದ ಸ್ವರ್ಗಾರೋಹಣ ಪರ್ವದಲ್ಲಿ ಉಪಯೋಗಿಸಿಕೊಂಡಿದ್ದಾನೆ. ಕಥೆ ಹೀಗಿದೆ :

ವೈತರಣೀ ನದಿಯ ದಡದಲ್ಲಿರುವ ವೇದಪುರದ ನಿವಾಸಿಯಾದ ಸುರೇಶ್ವರನೆಂಬ ಬ್ರಾಹ್ಮಣನ ಬಳಿ ತಪತಿ ಎಂಬ ಸೇವಕನಿದ್ದನು. ಪೊದೆಗಳನ್ನು ಕತ್ತರಿಸಿ ಒಡೆಯನ ಬತ್ತದ ಗದ್ದೆಯನ್ನು ಉಳುತ್ತಿದ್ದಾಗ ತಪತಿಗೆ ತುಂಬ ಬೆಲೆಬಾಳುವ ಒಂದು ಚಿನ್ನದ ಬಳೆ ದೊರಕಿತು. ಅವನು ಒಡನೆಯೇ ಅದನ್ನು ತನ್ನ ಬ್ರಾಹ್ಮಣ ಯಜಮಾನನ ಬಳಿಗೊಯ್ದು ಅವನಿಗೆ ಕೊಡಲು ಹೋದನು. ಬ್ರಾಹ್ಮಣನು ಅದನ್ನು ತೆಗೆದುಕೊಳ್ಳಲು ಒಪ್ಪದೆ, ಅದನ್ನು ಯಾರು ಕಂಡರೋ ಅವರಿಗೇ ಅದು ನ್ಯಾಯವಾಗಿ ಸೇರತಕ್ಕದ್ದೆಂದು ತಿಳಿಸಿದನು. ತಪತಿಯು ತನಗೆ ಪ್ರತಿನಿತ್ಯದ ಕೂಲಿ ಮಾತ್ರ ಸಲ್ಲತಕ್ಕದ್ದೆಂದೂ ತನ್ನ ಯಜಮಾನನ ಗದ್ದೆಯಲ್ಲಿ ಸಿಕ್ಕಿದ ಬಳೆಯು ತನಗೆ ಸಲ್ಲತಕ್ಕದ್ದಲ್ಲವೆಂದೂ ಹೇಳಿದನು. ಈ ವಿಷಯದ ವಿವಾದವು ರಾಜನಾದ ಯುಧಿಷ್ಠಿರನ ಬಳಿಗೆ ತೀರ್ಪಿಗಾಗಿ ಬಂದಿತು. ಯುಧಿಷ್ಠಿರನು ಆ ಬಳೆಯನ್ನು ಸಮಾರ್ಧವಾಗಿ ಮಾಡಿ ಇಬ್ಬರೂ ಒಂದೊಂದು ಭಾಗವನ್ನು ತೆಗೆದುಕೊಳ್ಳಬೇಕೆಂದು ತಿಳಿಸಿದನು. ಆದರೆ ಬ್ರಾಹ್ಮಣನೂ ಸೇವಕನೂ ತಮ್ಮ ಮುಂಚಿನ ಅಭಿಪ್ರಾಯವನ್ನು ಬಿಡದೆ ಆ ಬಳೆಯ ಯಾವ ಭಾಗವನ್ನೂ ಪಡೆಯಲು ನಿರಾಕರಿಸಿದರು. ಯುಧಿಷ್ಠಿರನಿಗೆ ಅತ್ಯಾಶ್ಚರ್ಯವಾಯಿತು. ಅವನು ತನ್ನ ತಮ್ಮನಾದ ಸಹದೇವನನ್ನು ಕೇಳಿದನು. ''ಇನ್ನೂ ಕಲಿಯುಗ ಬಂದಿಲ್ಲವೇನು ?'' ಯುಧಿಷ್ಠಿರನು ಇನ್ನೂ ಕೆಲವು ವರ್ಷಗಳು ಜೀವನದಲ್ಲಿ ಸುಖವಾಗಿರಲಿ ಎಂಬ ಉದ್ದೇಶದಿಂದ ಕಳೆದ ಹನ್ನೆರಡು ವರ್ಷಗಳಿಂದಲೂ ಕಲಿಯುಗವನ್ನು ಬಂಧನದಲ್ಲಿಟ್ಟು ಅದು ಪ್ರಾರಂಭವಾಗದಂತೆ ಮಾಡಿರುವುದಾಗಿ ಸಹದೇವನು ಹೇಳಿದನು. ಈ ಸಮಯಕ್ಕೆ ಸರಿಯಾಗಿ ಅಶರೀರವಾಣಿಯೊಂದು ಕಲಿಯುಗವನ್ನು ಬಿಡುಗಡೆ ಮಾಡಬೇಕೆಂದು ನುಡಿದುದು ಕೇಳಿಸಿತು. ಕಲಿಯುಗವು ಬಂಧನ ಮುಕ್ತವಾದೊಡನೆಯೇ ಬ್ರಾಹ್ಮಣನ ಮತ್ತು ಅವನ ಸೇವಕನ ನಡವಳಿಕೆಯಲ್ಲಿ ದೊಡ್ಡ ವ್ಯತ್ಯಾಸವು ಕಂಡು ಬಂದಿತು. ಆ ಇಬ್ಬರೂ ಈಗ ಚಿನ್ನದ ಬಳೆಯನ್ನು ಪೂರ್ತಿಯಾಗಿ ಪಡೆಯಲು ಅಪೇಕ್ಷಿಸಿ ಒಬ್ಬರ ಕೈಯಿಂದ ಒಬ್ಬರು ಕೀಳಲು ಮೊದಲು ಮಾಡಿದರು. ಕಲಿಯುಗ ಬಂದ ಮೇಲೆ ಪರೀಕ್ಷಿತನು ರಾಜನಾದನು. ಆ ಇಬ್ಬರೂ ಈಗ ಆ ರಾಜನ ಬಳಿಗೆ, ಈ ವ್ಯಾಜ್ಯದ ತೀರ್ಮಾನಕ್ಕಾಗಿ ಬಂದರು. ಅವರಿಬ್ಬರ ವಾದವನ್ನು ಕೇಳಿದ ಹೊಸ ರಾಜನು ಹೀಗೆ ಹೇಳಿದನು. ''ಭೂಮಿಯೆಲ್ಲ ರಾಜ

ನದು. ಬಳೆಯು ಭೂಮಿಯಲ್ಲಿ ಕಂಡು ಬಂದದ್ದರಿಂದ ಅದು ರಾಜನಿಗೆ ಸೇರತಕ್ಕದ್ದು." ಹೀಗೆ ಹೇಳಿ ರಾಜನು ಆ ಬಳೆಯನ್ನು ತೆಗೆದುಕೊಂಡುಬಿಟ್ಟನು.

ವಿಜಯನಗರಕ್ಕೂ ಬಹಮನಿ ರಾಜ್ಯಕ್ಕೂ ನಡುವೆ ಯುದ್ಧ ನಡೆಯುವಂತೆ ಮಾಡಿದ ಅಕ್ಕಸಾಲೆಯ ಮಗಳ ಚಾರಿತ್ರಿಕ ಘಟನೆಯಿಂದ ಸ್ವಲ್ಪ ವಿಷಯವನ್ನು ಉಪಯೋಗಿಸಿಕೊಂಡು ಸರಳದಾಸನು ಇನ್ನೊಂದು ಪೌರಾಣಿಕ ಕಥೆಯನ್ನು ಕಟ್ಟಿದ್ದಾನೆ. ಈ ಪ್ರಸಂಗ ಹೀಗಿದೆ – ಕ್ರಿ. ಶ. 1406 ರಲ್ಲಿ ಹರಿಹರನು ಸತ್ತ ಮೇಲೆ ಅವನ ಮಗನಾದ ಎರಡನೇ ಬುಕ್ಕರಾಯನು ವಿಜಯನಗರಕ್ಕೆ ರಾಜನಾದನು. ಆಗ ಬಹಮನೀ ರಾಜ್ಯಕ್ಕೆ ಸೇರಿದ್ದ ರಾಯಚೂರು ಜಿಲ್ಲೆಯಲ್ಲಿನ ಮುದ್ಗಲ್ ಎಂಬ ಊರಿನ ಒಬ್ಬ ಅಕ್ಕಸಾಲಿಗನ ಮಗಳಾದ ಪಾರ್ತಳ್ ಎಂಬ ಯುವತಿಯನ್ನು ಮದುವೆಯಾಗಲು ಇಷ್ಟಪಟ್ಟನು. ಅವಳಿಗೆ ಪಾಠವನ್ನು ಬೋಧಿಸುತ್ತಿದ್ದ ಮನೆಯ ಉಪಾಧ್ಯಾಯನಿಂದ ಅವಳ ಅಪೂರ್ವ ಸೌಂದರ್ಯವನ್ನು ಕೇಳಿ ಅವಳಲ್ಲಿ ಮೋಹಗೊಂಡಿದ್ದ ಅವನು ಅವಳ ತಂದೆ ತಾಯಿಗಳಿಗೆ ತಾನು ಅವಳನ್ನು ಮದುವೆ ಮಾಡಿಕೊಳ್ಳುವುದಾಗಿ ಹೇಳಿ ಕಳುಹಿಸಿದನು. ಆದರೆ, ತನ್ನ ತಂದೆಯ ಮನೆಯಿಂದ ದೂರವಾಗಿ ರಾಜನ ಅರಮನೆಯ ಅಂತಃಪುರದಲ್ಲಿ ಜೀವಿಸುವ ರೀತಿಯನ್ನು ಅವಳು ಇಷ್ಟ ಪಡದೆ ರಾಜನ ಮದುವೆಯ ಮಾತುಕತೆಗಳನ್ನು ತಳ್ಳಿಹಾಕಿದಳು. ಆ ಬಳಿಕ ಬುಕ್ಕರಾಯನು ಐದುಸಾವಿರ ಸೈನಿಕರ ದಂಡನ್ನು ಕಳುಹಿಸಿ ಅವಳನ್ನು ಸೆರೆಹಿಡಿದು ತನ್ನ ಬಳಿಗೆ ತರುವಂತೆ ಅಪ್ಪಣೆ ಮಾಡಿದನು. ವಿಜಯ ನಗರದ ಸೈನ್ಯವು ಬರುತ್ತಿರುವುದನ್ನು ಕೇಳಿ ಪಾರ್ತಳ್ ಮತ್ತು ಅವಳ ತಂದೆತಾಯಿಗಳು ಮುದ್ಗಲನ್ನು ಬಿಟ್ಟು ಬೇರೆಡೆಗೆ ಓಡಿಹೋದರು. ಬಹಮನಿ ರಾಜ್ಯದ ಸುಲ್ತಾನನಾದ ಫಿರೋಜ್ ಷಹನಿಗೆ ಇದು ಗೊತ್ತಾಯಿತು. ಇದನ್ನೇ ಕಾರಣವನ್ನಾಗಿ ಮಾಡಿಕೊಂಡು ಅವನು ವಿಜಯನಗರದ ಮೇಲೆ ಯುದ್ಧವನ್ನು ಘೋಷಿಸಿದನು. ಯುದ್ಧವು ಬಹುದಿನಗಳ ತನಕ ನಡೆದು ಕೊನೆಗೆ ಬಹಮನಿ ರಾಜ್ಯವೇ ಗೆದ್ದಂತಾಯಿತು. ಬುಕ್ಕರಾಯನು ತನ್ನ ಕುಟುಂಬದ ಒಂದು ಹೆಣ್ಣನ್ನು ಫಿರೋಜ್‌ಷಹನಿಗೆ ಕೊಡಬೇಕಾಯಿತಲ್ಲದೆ ಅವಳೊಡನೆ ಅಗಾಧವಾದ ಬೆಲೆಬಾಳುವ ಬಳುವಳಿಯನ್ನು ನೀಡಬೇಕಾಯಿತು. ಕೊನೆಗೆ ಸುಲ್ತಾನನ ಮಗನಾದ ಹಸನ್ ಖಾನನಿಗೆ ಪಾರ್ತಲಳನ್ನು ಕೊಟ್ಟು ಮದುವೆಯಾಯಿತು.[3]

ಸರಳದಾಸನು ಈ ಕಥೆಯನ್ನು ಪೂರ್ತಿಯಾಗಿ ಅನುಸರಿಸಿಲ್ಲ. ಆದರೆ ಇದರಿಂದ ಕೆಲವು ಅಂಶಗಳನ್ನು ತೆಗೆದುಕೊಂಡು ಅವನ ಮಹಾಭಾರತದ ವನಪರ್ವದಲ್ಲಿ ಈ ಮುಂದೆ ಹೇಳುವ ಕಥೆಯನ್ನು ಸೃಷ್ಟಿಸಿದ್ದಾನೆ.

ಉತ್ಕಲದ ಬ್ರಾಹ್ಮಣನಾದ ಮುದ್ಗಲ ಪಂಡನು ತುಂಬ ಧಾರ್ಮಿಕನಾಗಿದ್ದು ತಿಂಗಳಿನಲ್ಲಿ ಹದಿನೈದು ದಿನ ಉಪವಾಸವಿದ್ದು ಮಿಕ್ಕ ಹದಿನೈದುದಿನ ಊಟಮಾಡುವ ಒಂದು ವಿಚಿತ್ರ ವ್ರತವನ್ನು ಅನುಸರಿಸುತ್ತಿದ್ದನು. ಒಮ್ಮೆ ವಾರಣಾಸಿಗೆ ಹೋಗುವ ಮಾರ್ಗ ಮಧ್ಯದ ಕಾಡಿನಲ್ಲಿ ಒಂದು ಸುಂದರವಾದ ಮನೆಯನ್ನು ಕಂಡನು. ಅಲ್ಲಿ ಬಹು

ರೂಪವತಿಯಾದ ಒಬ್ಬಳು ಕನ್ಯೆಯೂ ಅವಳ ತಾಯಿಯೂ ವಾಸಿಸುತ್ತಿದ್ದರು. ಹಿರಣ್ಯ ಕೇಶಿ ಎಂಬ ಈ ಕನ್ಯೆಯು ತನ್ನ ಮನೆಯಲ್ಲಿ ವಿಶ್ರಾಂತಿ ಪಡೆಯುವಂತೆ ಆ ಬ್ರಾಹ್ಮಣನನ್ನು ಆಹ್ವಾನಿಸಿ ಅವನಿಗೆ ಆಹಾರವನ್ನೂ ವಸ್ತ್ರಗಳನ್ನೂ ನೀಡಿದಳು. ಬಳಿಕ ತನ್ನ ಸ್ತ್ರೀತ್ವದ ಎಲ್ಲ ಬಿಂಕ ಬಿನ್ನಾಣಗಳನ್ನೂ ಪ್ರಯೋಗಿಸಿ ಅವನನ್ನು ಆಕರ್ಷಿಸಿದಳು. ಅವನು ಅವಳಲ್ಲಿ ಸಂಪೂರ್ಣವಾಗಿ ಮೋಹಗೊಂಡ ಬಳಿಕ ತನ್ನ ಹಿಂದಿನ ಬಿಂಕ ಬಿನ್ನಾಣಗಳನ್ನು ಬಿಟ್ಟು ತಾನು ಗಂಡಸಿನ ಮುಖವನ್ನೇ ನೋಡದ ವ್ರತವನ್ನು ಹಿಡಿದಿರುವುದಾಗಿ ಹೇಳಿದಳು. ಈ ವೇಳೆಗೆ ಮೋಹಾವೇಶದಿಂದ ಸಂಪೂರ್ಣವಾಗಿ ಸೋತಿದ್ದ ಮುದ್ಗಲ ಪಂಡನು ಅವಳನ್ನು ಅನೇಕ ರೀತಿಯಲ್ಲಿ ಪ್ರಾರ್ಥಿಸಿ ಕೇಳಿಕೊಂಡಮೇಲೆ ಅವಳು ಅವನೊಡನೆ ಸಂಭೋಗಿಸಲು ಒಪ್ಪಿಗೆಯಿತ್ತಳು. ಅವರಿಬ್ಬರೂ ಅಲ್ಲಿ ಗಂಡ ಹೆಂಡಿರಂತೆ ಜೀವನ ನಡೆಸಿದರು. ಮುದ್ಗಲಪಂಡನು ತನ್ನ ಹಿಂದಿನ ಪಕ್ಷೋಪವಾಸವನ್ನೂ ಇತರ ಸಂಯಮಗಳನ್ನೂ ತೊರೆದು ತಾನು ಬ್ರಾಹ್ಮಣಜಾತಿಯವನಾದರೂ ಅವಳು ತಿಂದು ಮಿಕ್ಕ ಎಂಜಲನ್ನು ತಿನ್ನುವವರೆಗೂ ಪತನಗೊಂಡನು. ನಾಲ್ಕು ವರ್ಷಗಳ ತರುವಾಯ ಅವನು ತೀರಿ ಕೊಂಡಾಗ ಮೃತ್ಯುದೇವತೆಯಾದ ಯಮನು, ಕರ್ತವ್ಯ ಭ್ರಷ್ಟನಾದ ಅವನು ಪ್ರತಿ ನಿತ್ಯವೂ ಅಸಹ್ಯವಾದ ಆಹಾರವನ್ನು ತಿನ್ನುವ ನರಿಯಾಗಿ ಹುಟ್ಟುವಂತೆ ಅಪ್ಪಣೆ ಮಾಡಿದನು. ಸರಳದಾಸನು ಈ ಕಥೆಯನ್ನು ತನ್ನ ಮಹಾಭಾರತದಲ್ಲಿ ಸೇರಿಸಿ ಸಗರನು ಅವನ ಹಿಂದಿನ ಜನ್ಮದಲ್ಲಿ ಈ ನರಿಯಾಗಿದ್ದನು ಎಂದು ಹೇಳುತ್ತಾನೆ.

ಈ ಮೇಲಿನ ಕಥೆಯಲ್ಲಿ ಮುದ್ಗಲ ಎಂಬ ಊರಿನ ಹೆಸರನ್ನು ಒಬ್ಬ ವ್ಯಕ್ತಿಯ ಹೆಸರನ್ನಾಗಿ ಕವಿಯು ಮಾರ್ಪಡಿಸಿದ್ದಾನೆ. ನಿಜವಾಗಿ ಮುದ್ಗಲ್ ಊರಿನ ಬ್ರಾಹ್ಮಣ ಅಥವಾ ಮುದ್ಗಲಪಂಡನು ಚಾರಿತ್ರಿಕಘಟನೆಯಲ್ಲಿ ಬರುವ ಹಸನ್‌ಖಾನ್. ರಂಜಾನ್ ತಿಂಗಳಿನಲ್ಲಿ ಮಹಮ್ಮದೀಯರು ದಿನಕ್ಕೊಮ್ಮೆ ಮಾತ್ರ ಊಟಮಾಡುತ್ತಾರೆ. ಆದುದ ರಿಂದ ಅದು ಒಂದು ಬಗೆಯಲ್ಲಿ ಪಕ್ಷೋಪವಾಸವಾಗುತ್ತದೆ. ಅಕ್ಕಸಾಲಿಗನ ಮಗಳಾದ ಪಾರ್ತಲ್ ಎಂಬುವಳಿಗೆ ಕವಿಯು ಹಿರಣ್ಯಕೇಶಿ ಅಂದರೆ ಹೊಂಬಣ್ಣದ ಕೇಶವುಳ್ಳವಳು ಎಂಬ ಅನ್ವರ್ಥವಾದ ಹೆಸರನ್ನು ಕೊಟ್ಟಿದ್ದಾನೆ. ಈ ಕಥೆಯನ್ನು ಬರೆಯುವುದರಲ್ಲಿ ಅವನು ಹೀಗೆ ಚಾರಿತ್ರಿಕ ಘಟನೆಗಳಲ್ಲಿ ಸ್ವಲ್ಪ ವಿಷಯಗಳನ್ನು ಉಪಯೋಗಿಸಿಕೊಂಡಿ ದ್ದಾನೆ.

ಮೇಲೆ ಹೇಳಿದ ಚರಿತ್ರೆಗೆ ಸಂಬಂಧಿಸಿದ ಕಥೆಗಳಲ್ಲದೆ, ಇತರ ಕಥೆಗಳೂ ಇವೆ. ಚರಿತ್ರೆಗೆ ಸಂಬಂಧವಿಲ್ಲದ ಆದರೆ ಆತನ ಕಾಲದಲ್ಲಿ ಜನಜನಿತವಾಗಿದ್ದ ಇಲ್ಲದಿದ್ದರೆ ಸ್ವಕಲ್ಪಿತವಾದ ಸರಳದಾಸನ ಉಪಾಖ್ಯಾನಗಳ ಪರಿಚಯವನ್ನು ನಾವು ನಮ್ಮ ಓದು ಗರಿಗೆ ಸ್ವಲ್ಪ ಮಾಡಿಕೊಡಬೇಕು. ಮಹಾಭಾರತ ಯುದ್ಧಕ್ಕೆ ಕಾರಣವೇನೆಂಬುದನ್ನು ಸಂಸ್ಕೃತದ ಮೂಲ ಮಹಾಭಾರತದಲ್ಲಿ ಕಾಣದ ರೀತಿಯಲ್ಲಿ ಸರಳದಾಸನು ನಿರೂಪಿಸಿ ದ್ದಾನೆ. ಆ ಕಥೆ ಹೀಗಿದೆ :

ಒಂದು ಕಡೆ ಕೌರವರೂ ಮತ್ತೊಂದು ಕಡೆ ಪಾಂಡವರೂ ಸೇರಿ 'ರಿಖಮಿತಿ'

ಎಂಬ ಆಟವನ್ನಾಡುತ್ತಿದ್ದರು. ಎರಡು ಪಕ್ಷಗಳಲ್ಲಿ ಒಬ್ಬೊಬ್ಬರನ್ನು ಆರಿಸಿ ಅವರಲ್ಲಿ ಯಾರು ಬಲಶಾಲಿಗಳು ಎಂದು ಕಂಡು ಹಿಡಿಯುವುದು ಈ ಆಟವ ಕ್ರಮ. ಭೀಮನ ಅಸಾಧಾರಣವಾದ ಪರಾಕ್ರಮದಿಂದ ಈ ಆಟದಲ್ಲಿ ಯಾವಾಗಲೂ ಪಾಂಡವರೇ ಗೆಲ್ಲುತ್ತಿದ್ದರು. ಕೌರವರ ಮುಂದಾಳಾದ ದುರ್ಯೋಧನನಿಗೆ ಅವರ ಗೆಲುವನ್ನು ಕಂಡು ಹೊಟ್ಟೆಯುರಿಚ್ಚುಂಟಾಯಿತು; ಆದುದರಿಂದ ಅವರನ್ನು ಬೇರೆ ಯಾವ ವಿಧದಲ್ಲಾದರೂ ಅವಮಾನಮಾಡುವ ಯೋಚನೆಮಾಡಿದನು. ಪಾಂಡವರೆಲ್ಲರೂ ಪಾಂಡುವಿನ ಮಕ್ಕಳಲ್ಲ ವೆಂಬುದು ಅವನಿಗೆ ಗೊತ್ತಿದ್ದಿತು. ಆದುದರಿಂದ ಅವರನ್ನು ಅವಮಾನಮಾಡುವ ಉದ್ದೇಶದಿಂದಲೇ ಯುಧಿಷ್ಠಿರ, ಭೀಮ, ಅರ್ಜುನ, ನಕುಲ ಇವರು ತನ್ನ ಸಭೆಗೆ ಬಂದಾಗ ಅವರನ್ನು ಕ್ರಮವಾಗಿ ಧರ್ಮಪುತ್ರ, ಪವನಪುತ್ರ, ಇಂದ್ರಪುತ್ರ, ಅಶ್ವಿನೀಪುತ್ರ ಎಂದೇ ಕರೆಯುತ್ತಿದ್ದನು. ಇದರಿಂದ ಭೀಮನಿಗೆ ತುಂಬ ಅವಮಾನವಾದಂತಾಯಿತು. ಒಂದು ದಿನ ಒಂದು ಕೋಣೆಯೊಳಗೆ ಸೇರಿಕೊಂಡು ಅನ್ನನೀರಿಲ್ಲದೆ ಹೊರಗೆ ಬರದೆ ಇದ್ದನು. ತಾಯಿಯಾದ ಕುಂತಿ ಮತ್ತಿತರರು ಹೇಳಿ ನೋಡಿದುದೆಲ್ಲ ವಿಫಲವಾಯಿತು. ಕೊನೆಗೆ ಅವರು ಶ್ರೀಕೃಷ್ಣನನ್ನು ಮಧ್ಯಸ್ಥಿಕೆಗೆ ಕರೆದರು. ಭೀಮನ ಮನಸ್ಸಿನ ಖೇದವನ್ನು ಶಮನಮಾಡುವುದಾಗಿ ಶ್ರೀಕೃಷ್ಣನು ಮಾತುಕೊಟ್ಟಾಗ, ಭೀಮನು ಬಾಗಿಲು ತೆಗೆದು ಈಚೆಗೆ ಬಂದು ತನ್ನ ಖೇದದ ಕಾರಣವನ್ನು ವಿವರಿಸಿದನು. ಶ್ರೀಕೃಷ್ಣನು ನಕ್ಕು ಹೀಗೆ ಹೇಳಿದನು : "ನೀನು ದುರ್ಯೋಧನನನ್ನು ಗೋಲಕಪುತ್ರ ಎಂದು ಪ್ರತಿಯಾಗಿ ಕರೆಯಬೇಕು. ಅಷ್ಟೆ!" ಈಗ ಭೀಮನಿಗೆ ಒಂದು ರಹಸ್ಯಾಸ್ತ್ರವು ಸಿಕ್ಕಂತಾಯಿತು. 'ಗೋಲಕಪುತ್ರ' ಎಂಬ ಪದವನ್ನು ಅನೇಕ ಬಾರಿ ಉಚ್ಚರಿಸಿ ನೆನಪಿ ನಲ್ಲಿಟ್ಟುಕೊಳ್ಳಲು ಪ್ರಯತ್ನಪಟ್ಟನು. ಅಷ್ಟಾದರೂ ರಾತ್ರಿ ಅವನು ಮಲಗಿ ನಿದ್ರಿಸಿದಾಗ ಆ ಪದವು ಮರತುಹೋಯಿತು; ಬೆಳಿಗ್ಗೆ ಬೇಗ ಎದ್ದು ತನ್ನ ಮನೆಯ ಮೂಲೆ ಮೂಲೆ ಗಳೆಲ್ಲವನ್ನೂ ಹುಡುಕಿ ಆ ಪದವನ್ನು ನೆನಪಿಗೆ ತರಲು ಪ್ರಯತ್ನಪಟ್ಟನು. ಕೊನೆಗೆ ಅವನಿಗೆ ಸಹದೇವನ ಸಹಾಯದಿಂದ ಅದು ನೆನಪಿಗೆ ಬಂತು.

ಅಪಾರ ಅರ್ಥವುಳ್ಳ ಈ ಪದವನ್ನು ನೆನಪಿಟ್ಟುಕೊಂಡು ಭೀಮ ಮೂರನೆಯ ದಿನ ದುರ್ಯೋಧನನ ಸಭೆಯನ್ನು ತುಂಬ ಗೆಲುವಿನಿಂದ ಪ್ರವೇಶಿಸಿದನು. ರಾಜನು ಅವನನ್ನು 'ಪವನಪುತ್ರ' ಎಂದು ಕರೆದೊಡನೆಯೇ ಭೀಮನು ಅವನನ್ನು 'ಗೋಲಕ ಪುತ್ರ' ಎಂದು ಕರೆದನು. ಈ ಹೊಸ ಉಪಾಯದಿಂದ ದುರ್ಯೋಧನನಿಗೆ ದಿಗ್ಭ್ರಮೆ ಯಾಯಿತು. ಈ ಪದದ ಅರ್ಥ ಅವನಿಗೆ ಗೊತ್ತಿರಲಿಲ್ಲ. ಆದುದರಿಂದ ಬೇಗ ಸಭೆಯನ್ನು ವಿಸರ್ಜಿಸಿ ಮನೆಗೆ ಹೋಗಿ ಕೋಣೆಯೊಂದರಲ್ಲಿ ಸೇರಿಕೊಂಡನು. ಊಟ ಮಾಡುವಂತೆ ಅವನ ತಾಯಿಯೂ ಹೆಂಡತಿಯೂ ಕೇಳಿಕೊಂಡುದೆಲ್ಲ ವಿಫಲವಾಯಿತು. ಆದರೆ ಅವನ ತಾಯಿಯು 'ಗೋಲಕಪುತ್ರ' ಎಂಬ ಪದದ ಅರ್ಥವನ್ನು ವಿವರಿಸು ವುದಾಗಿ ಹೇಳಿದಾಗ ಅವನು ಬಾಗಿಲು ತೆರೆದನು.

ಆ ಬಳಿಕ ಗಾಂಧಾರಿಯು ಮಗನಿಗೆ ಅವನ ತಂದೆಯಾದ ಧೃತರಾಷ್ಟ್ರನೊಡನೆ

ತನ್ನ ಮದುವೆಯಾದ ಕಥೆಯನ್ನು ಹೇಳಿದಳು : ಅವಳು ಕೃಷ್ಣಪಕ್ಷದ ಕೊನೆಯ ದಿನ, ತುಂಬ ಅಶುಭದ ದಿನ, ಹುಟ್ಟಿದುದರಿಂದ, ಯಾವ ದೊರೆಯೂ ಅವಳನ್ನು ಮದುವೆ ಮಾಡಿಕೊಳ್ಳಲು ಇಷ್ಟಪಡಲಿಲ್ಲ. ಯಾರು ಅವಳನ್ನು ಮದುವೆಯಾಗುವುದಾಗಿ ಮಾತುಕತೆಯಾಡಿದರೊ, ಅವರು ಕೂಡಲೇ ಸತ್ತುಹೋದರು. ವ್ಯಾಸರ ಬುದ್ಧಿವಾದ ದಂತೆ ಅವಳ ತಂದೆಯಾದ ಗಾಂಧಾರಸೇನನು ಅವಳನ್ನು 'ಸಹದ' ಎಂಬ ಮರಕ್ಕೆ ಮದುವೆಮಾಡಿದನು. ಅದರ ಪರಿಣಾಮವಾಗಿ ಆ ಮರವು ಕೂಡಲೇ ಬಾಡಿ ಒಣಗಿ ಹೋಯಿತು. ಸಹದ ಮರದೊಡನೆ ಮೊದಲ ಮದುವೆಯಾದಮೇಲೆ ಅವಳನ್ನು ಧೃತ ರಾಷ್ಟ್ರನಿಗೆ ಕೊಟ್ಟು ಮದುವೆಯಾಯಿತು. 'ಗೋಲಕ' ಎಂಬುದು 'ಸಹದ' ಮರಕ್ಕೆ ಮತ್ತೊಂದು ಹೆಸರು. ಈ ಎಲ್ಲ ಕಥೆಯನ್ನೂ ಕೇಳಿದ ಮೇಲೆ ದುರ್ಯೋಧನನು ಹೇಳಿದನು. ''ಹಾಗಾದರೆ ನೀನು ವಿಧವೆ. ವಿಧವೆಯಾದ ಮಗಳನ್ನು ನಿನ್ನ ತಂದೆ ನನ್ನ ತಂದೆಗೆ ಕೊಟ್ಟು ಮದುವೆಮಾಡಿದನು. ಆದುದರಿಂದ ನಿನ್ನ ತಂದೆ ನನಗೆ ಶತ್ರು.''

ಹೀಗೆ ತನ್ನ ಮಾತಾಮಹನಾದ ಗಾಂಧಾರಸೇನನ ಮೇಲೆ ಅವನಿಗೆ ಅಗಾಧವಾದ ಸೇಡುಂಟಾಯಿತು. ಅವನ ಮೇಲೂ ಅವನ ನೂರು ಜನ ಮಕ್ಕಳ ಮೇಲೂ ಸೇಡು ತೀರಿಸಿ ಕೊಳ್ಳಲು ಅವನು ಅಪೇಕ್ಷೆಪಟ್ಟನು. ಅವನು ಸುಂದರವಾದ ಶಿಲಾಸೌಧವೊಂದನ್ನು ಕಟ್ಟಿಸಿ ಅವನ ಮಾತಾಮಹನನ್ನೂ ಸೋದರಮಾವಂದಿರನ್ನೂ ಪ್ರೀತಿವಿಶ್ವಾಸಗಳನ್ನು ತೋರಿಸಿ ಆಹ್ವಾನಿಸಲು ಗಾಂಧಾರ ದೇಶಕ್ಕೆ ಹೋದನು. ತನ್ನ ಮೊಮ್ಮಗನ ರಾಜಧಾನಿ ಯಲ್ಲಿ ಕೆಲವು ದಿನಗಳನ್ನು ಕಳೆಯುವ ಸಂತೋಷದಿಂದ ಆಕರ್ಷಿತನಾಗಿ ಗಾಂಧಾರಸೇನನು ಅವನ ನೂರು ಮಕ್ಕಳೊಡನೆ ಹಸ್ತಿನಾನಗರಕ್ಕೆಬಂದನು. ಅಲ್ಲಿ ಮುಂಚೆಯೇ ಏರ್ಪಡಿಸಿದ ಯೋಜನೆಯಂತೆ ಆ ಸುಂದರ ಶಿಲಾಸೌಧದಲ್ಲಿ ಅವರನ್ನು ಇಳಿಸಿದರು. ಆ ಬಳಿಕ ಅಲ್ಲಿಯೇ ಅವರನ್ನು ಸೆರೆಯಲ್ಲಿಡಲಾಯಿತು. ಅವರಿಗೆ ಒಂದು ಕಿಟಕಿಯ ಮೂಲಕ ಆಹಾರವನ್ನು ಕೊಡಬೇಕೆಂದು, ಅದು ಬರಬರುತ್ತಾ ಕಡಮೆಯಾಗಿ ನೂರುದಿನಗಳಾಗುವ ವೇಳೆಗೆ ಅದು ಒಬ್ಬನಿಗೆ ಮಾತ್ರ ಸಾಕಾಗುವಷ್ಟು ಆಹಾರವಾಗಿರಬೇಕೆಂದು ದುರ್ಯೋಧನನು ಅಪ್ಪಣೆಮಾಡಿದನು. ಈ ಕಟ್ಟಪ್ಪಣೆಯ ಪರಿಣಾಮವಾಗಿ ಕೆಲವು ದಿನಗಳಲ್ಲಿಯೇ ಸೆರೆಯಲ್ಲಿದ್ದವರಲ್ಲಿ ಅನೇಕರು ಸತ್ತುಹೋದರು. ಉಳಿದವರೆಲ್ಲ ಒಟ್ಟು ಸೇರಿ ಕೊನೆಗೆ ಯಾರು ಉಳಿದಿರಬೇಕೆಂದು ಆರಿಸಲು ಪರ್ಯಾಲೋಚನೆ ಮಾಡಿದರು. ಹಿರಿಯ ಮಗನಾದ ಶಕುನಿಯು ಅತಿ ಶ್ರೇಷ್ಠನೂ ಸಮರ್ಥನೂ, ತುಂಬ ಬುದ್ಧಿವಂತನೂ ಆಗಿದ್ದುದರಿಂದ, ಅವನನ್ನೇ ಕೊನೆಗೆ ಉಳಿಯಬೇಕಾದವನನ್ನಾಗಿ ಆರಿಸಲಾಯಿತು. ಅವನ ತಂದೆಯಾದ ಗಾಂಧಾರಸೇನನು ಸ್ನೇಹದ ತೋರಿಕೆಯಿಂದ ದುರ್ಯೋಧನನ ಮತ್ತು ಅವನ ಕುಟುಂಬದ ಮೇಲೆ ಸೇಡುತೀರಿಸಿಕೊಳ್ಳುವ ಕರ್ತವ್ಯವನ್ನು ಆ ಮಗನಿಗೆ ಬಿಟ್ಟುಕೊಟ್ಟನು. ತಾನು ಸತ್ತಮೇಲೆ ತನ್ನ ಕೈಮಣಿಕಟ್ಟಿನ ಮೂಳೆಗಳನ್ನು ದಾಳ ಗಳನ್ನಾಗಿ ಮಾಡಿದರೆ ಅವು ಶಕುನಿಯು ಕೇಳಿದ ಗರಗಳನ್ನು ಬೀಳಿಸುವಂತೆ ಅದ್ಭುತ

ವಾಗಿ ನಡೆದುಕೊಳ್ಳುವುವೆಂದೂ, ಅವುಗಳ ಮೂಲಕವೆ ಮಹಾಭಾರತದ ಯುದ್ಧ ವನ್ನು ಮೊದಲು ಮಾಡಬೇಕೆಂದೂ ಗಾಂಧಾರಸೇನನು ತಿಳಿಸಿದನು.

ಕೊನೆಯ ದಿನ ಬಂತು. ಈ ಸೆರೆಮನೆಯಲ್ಲಿ ಶಕುನಿಯೊಬ್ಬನೇ ಬದುಕಿ ಉಳಿದಿದ್ದನು. ದುರ್ಯೋಧನನು ಆ ದಿನ ಬಳಿಯಲ್ಲಿದ್ದ ಒಂದು ಆಲದ ಮರದ ಕೆಳಗೆ ಕುಳಿತು ನಗುತ್ತಾ ಇದ್ದುದನ್ನು ಪ್ರತಿನಿತ್ಯವೂ ಶಕುನಿಗೆ ಆಹಾರವನ್ನು ತಂದುಕೊಡುತ್ತಿದ್ದ ಸೇವಕಿಯು ಗಮನಿಸಿದಳು. ನಗುವಿನ ನೋಟವನ್ನು ನೋಡಿ ಅವಳಿಗೂ ನಗುವುದನ್ನು ತಡೆ ಹಿಡಿಯುವುದು ಸಾಧ್ಯವಾಗಲಿಲ್ಲ. ರಾಜನಿಗೆ ಕೋಪ ಬಂದು "ನೀನೇಕೆ ನಗುತ್ತೀಯೆ?" ಎಂದು ಪ್ರಶ್ನಿಸಿದನು. "ರಾಜರಾದ ತಾವು ನಗುತ್ತಿದ್ದುದರಿಂದ" ಎಂದು ಸೇವಕಿಯು ವಿನೀತಳಾಗಿಯೇ ಉತ್ತರವಿತ್ತಳು. "ನಾನೇಕೆ ನಕ್ಕೆ?" ಎಂದು ರಾಜನು ಮತ್ತೆ ಕೇಳಿದನು. ಆ ಬಡಪಾಯಿಗೆ ಉತ್ತರ ಕೊಡಲು ತೋರಲಿಲ್ಲ. ಅವಳು ಒಂದು ದಿನದೊಳಗಾಗಿ ತನ್ನ ಪ್ರಶ್ನೆಗೆ ಉತ್ತರ ಕೊಡಬೇಕೆಂದೂ ಇಲ್ಲದಿದ್ದರೆ ಅವಳ ತಲೆಯನ್ನು ಕತ್ತರಿಸಿ ಬಿಡುವುದಾಗಿಯೂ ದುರ್ಯೋಧನನು ಹೇಳಿದನು.

ಆ ದಿನ ಶಕುನಿಗೆ ಆಹಾರವನ್ನು ಕೊಡುತ್ತಿದ್ದಾಗ ಸೇವಕಿಯು ದೊರೆಯ ಕಠೋರವಾದ ಅಪ್ಪಣೆಯನ್ನು ಹಾಗೆ ಅಪ್ಪಣೆಮಾಡಲು ಅದಕ್ಕೆ ಸಂಬಂಧಿಸಿದ ಘಟನೆಗಳನ್ನು ಅವನಿಗೆ ತಿಳಿಸಿದಳು. ಅವಳು ಹೇಳಿದುದನ್ನೆಲ್ಲ ಕೇಳಿ ಶಕುನಿಯು ರಾಜನಿಗೆ ಹೀಗೆ ಹೇಳುವಂತೆ ತಿಳಿವಳಿಕೆಕೊಟ್ಟನು : ರಾಜನು ಆಲದ ಮರದ ಬುಡದಲ್ಲಿ ಜಲಬಾಧೆಯನ್ನು ತೀರಿಸಿಕೊಳ್ಳುತ್ತಾ ಇದ್ದಾಗ ಅವನ ಉಚ್ಚೆಯಲ್ಲಿ ಆಲದ ಹಣ್ಣಿನ ಸಣ್ಣ ಸಣ್ಣ ಬೀಜಗಳು ತೇಲಾಡುತ್ತಿದ್ದುದನ್ನು ನೋಡಿ ಅವನು ನಕ್ಕನು. ಅಂಥ ಸಣ್ಣಬೀಜಗಳಿಂದ ಅಂಥಾ ದೈತ್ಯಾಕಾರದ ವೃಕ್ಷಗಳು ಬೆಳೆಯುವ ಪ್ರಕೃತಿಸೂತ್ರವು ಅವನಲ್ಲಿ ನಗುವನ್ನುಂಟುಮಾಡಿತು. ಸೇವಕಿಯು ಹಿಂದಿರುಗುತ್ತಾ ಶಕುನಿಯು ಹೇಳಿಕೊಟ್ಟಿದ್ದಂತೆ ರಾಜನಿಗೆ ಎಲ್ಲವನ್ನೂ ತಿಳಿಸಿದಳು. ತಾನು ನಕ್ಕದ್ದಕ್ಕೆ ಕಾರಣವಾದ ಸನ್ನಿವೇಶವನ್ನು ದಡ್ಡಳಾದ ಆ ಸೇವಕಿಯು ಇಷ್ಟುಖಚಿತವಾಗಿ ಹೇಳಬಹುದೆಂಬುದನ್ನು ರಾಜನು ನಂಬಲಿಲ್ಲ. ಹೀಗೆ ಹೇಳಬೇಕೆಂದು ಅವಳಿಗೆ ಯಾರು ತಿಳಿಸಿದರೋ ಅವನ ಹೆಸರನ್ನು ಹೇಳಬೇಕೆಂದು ರಾಜನು ಒತ್ತಾಯ ಮಾಡಿದನು. ಅವಳು ಶಕುನಿಯ ಹೆಸರನ್ನು ಹೇಳಿದಾಗ, ದುರ್ಯೋಧನನು ತಾನೇ ಶಿಲಾಸೌಧಕ್ಕೆ ಹೋಗಿ, ಶಕುನಿಯನ್ನು ಸೆರೆಯಿಂದ ಬಿಡುಗಡೆ ಮಾಡಿ, ಸಕಲ ಗೌರವಗಳೊಡನೆ ಅವನನ್ನು ಅರಮನೆಗೊಯ್ದು, ತನ್ನ ಮುಖ್ಯಮಂತ್ರಿಯನ್ನಾಗಿಮಾಡಿದನು. ತೋರಿಕೆಗೆ ಶಕುನಿಯು ದುರ್ಯೋಧನನ ಆಪ್ತಮಿತ್ರನೂ ಶುಭಾಕಾಂಕ್ಷಿಯೂ ಆದನು; ಆದರೆ ಅಂತರಂಗದಲ್ಲಿ ಅವನ ಮತ್ತು ಅವನ ಕುಟುಂಬದ ನಾಶವನ್ನು ಕುರಿತು ಯೋಜನೆಯನ್ನು ತಯಾರಿಸುತ್ತಿದ್ದನು. ದುರ್ಯೋಧನ ಮತ್ತು ಯುಧಿಷ್ಠಿರ–ಇವರ ನಡುವೆ ಪಗಡೆಯ ದ್ಯೂತವನ್ನು ಏರ್ಪಡಿಸಿದವನು ಅವನೇ. ಕೊನೆಗೆ ಮಹಾಭಾರತ ಯುದ್ಧವಾಯಿತು.

ಮೂಲ ಮಹಾಭಾರತದಲ್ಲಿ ಇಲ್ಲದಿರುವ ಸರಳದಾಸನ ಮತ್ತೊಂದು ಉಪಾಖ್ಯಾನ, ಆದಿಪರ್ವದಲ್ಲಿ ಬರುವ ನರಿಯ ಕಥೆ. ಒಂದಾನೊಂದು ಕಾಲದಲ್ಲಿ ಅನೇಕ ಬ್ರಾಹ್ಮಣರು ವಾಸಿಸುತ್ತಿದ್ದ ಸುಕಾನ್ತಿ ಎಂಬ ಊರಿನ ಹತ್ತಿರದ ಕಾಡಿನಲ್ಲಿ ಒಂದು ನರಿ ದಂಪತಿಗಳು ವಾಸಿಸುತ್ತಿದ್ದವು. ಒಂದು ದಿನ ನರಿಗಳು ಆಹಾರವನ್ನು ಹುಡುಕುತ್ತಿದ್ದಾಗ, ಒಬ್ಬ ಬ್ರಾಹ್ಮಣ ವಿಧವೆಯಾದ ಯುವತಿಯು ದಾರಿಯ ಪಕ್ಕದಲ್ಲಿ ಆಗತಾನೆ ಹುಟ್ಟಿದ ಹಸುಗೂಸನ್ನು ಬಿಟ್ಟು ಹೋಗಿದ್ದುದು ಅವಕ್ಕೆ ಕಂಡುಬಂದಿತು. ಅವು ಆ ಮಗುವನ್ನು ತಮ್ಮ ಮನೆಗೆ ಕಚ್ಚಿಕೊಂಡುಹೋಗಿ ಜೇನುತುಪ್ಪವನ್ನೂ ಹಣ್ಣಿನರಸವನ್ನೂ ಕೊಟ್ಟು ರಕ್ಷಿಸಿದುವು. ಮಗುವು ಬೆಳೆದಂತೆಲ್ಲ ಅವು ಮಗುವಿಗೆ ಬೇರೆ ಬೇರೆ ವಿಧವಾದ ಆಹಾರ ಗಳನ್ನು ಅಕ್ಕಪಕ್ಕದ ಪ್ರದೇಶಗಳಿಂದ ಕದ್ದು ತಂದು ನೀಡುತ್ತಿದ್ದುವು. ಹುಡುಗಿಯು ಕ್ರಮೇಣ ತುಂಬ ಸುಂದರ ಯುವತಿಯಾಗಿ ಬೆಳೆದಳು. ಆ ರಾಜ್ಯದ ರಾಜನಾದ ಭಾಗ್ಯವರನು ಒಂದು ದಿನ ಬೇಟೆಯಾಡಲು ಕಾಡಿಗೆ ಬಂದಾಗ, ಇವಳು ರಾಜನ ಕಣ್ಣಿಗೆ ಬಿದ್ದು ಅವಳಲ್ಲಿ ಅವನಿಗೆ ಆಕರ್ಷಣೆಯುಂಟಾಯಿತು. ಅವಳ ಸೌಂದರ್ಯವನ್ನು ಕಂಡು ರಾಜನಿಗೆ ಅವಳಲ್ಲಿ ಮೋಹವುಂಟಾಯಿತು. ಅವಳನ್ನು ಮದುವೆಮಾಡಿಕೊಳ್ಳಬೇಕೆಂದು ಆಸೆಯಾಯಿತು. ಮಾರನೆಯ ದಿನ ರಾಜನು ಒಬ್ಬನೇ ಅಲ್ಲಿಗೆ ಬಂದು ಅವಳ ತಂದೆತಾಯಿ ನರಿದಂಪತಿಗಳಿಗೆ ಆ ಯುವತಿಯನ್ನು ಮದುವೆಮಾಡಿಕೊಳ್ಳುವ ಅಪೇಕ್ಷೆಯನ್ನು ಹೇಳಿದನು. ನರಿಗಳು ಕೂಡಲೇ ಒಪ್ಪಿಕೊಂಡವು. ಆದರೆ ನರಿಗಳು ಮಗಳನ್ನು ಮದುವೆ ಗಾಗಿ ಅರಮನೆಗೆ ಕರೆದುಕೊಂಡುಬರಬೇಕೆಂದು ಹೇಳಿದಾಗ ಅವು ಒಪ್ಪಲಿಲ್ಲ. ರಾಜನೇ ಹೆಣ್ಣಿನ ಮನೆಗೆ ಬರಬೇಕೆಂದು ನಿರ್ಧಾರವಾಗಿ ನುಡಿದುವು. ಆಗ ರಾಜ ಕೇಳಿದನು : "ವರನ ಕಡೆಯ ಬೀಗರನ್ನು ನೀವು ಹೇಗೆ ಸತ್ಕರಿಸಬಲ್ಲಿರಿ?" ನರಿಯು ಅವನಿಗೆ ಪ್ರತಿ ಪ್ರಶ್ನೆಯನ್ನು ಹಾಕಿತು, "ನಿನ್ನ ಶ್ರೇಷ್ಠ ಬ್ರಾಹ್ಮಣರಿಗೂ ಸಿರಿವಂತರಿಗೂ ತೆರಿಗೆಯಿಲ್ಲದೆ ಭೂಮಿಕಾಣಿಗಳನ್ನು ಕೊಟ್ಟಿರುವಂತೆ ನಮಗೇನು ಕೊಟ್ಟಿದ್ದೀಯೆ?"

ಮಾರನೆಯ ದಿನ ರಾಜನು ದೊಡ್ಡ ಪರಿವಾರದೊಂದಿಗೆ ಕಾಡಿಗೆ ಬಂದನು. ಅಲ್ಲಿ ಮದುವೆಯು ತುಂಬ ವೈಭವದಿಂದಲೂ ವಿಜೃಂಭಣೆಯಿಂದಲೂ ನಡೆಯಿತು. ಮದುವೆಯ ಉತ್ಸವವು ಕೊನೆಗೊಂಡಾಗ ವರನು ಕೇಳಿದನು : "ಹೆಣ್ಣಿನ ಬಳುವಳಿ ಯೆಲ್ಲಿ ?" ನರಿಹೇಳಿತು : "ಬೇಸಾಯವಾಗುವ ನೆಲವೆಲ್ಲ ನಿನ್ನದು ಖಂಡಿತವಾಗಿ. ಆದರೆ ಎಲ್ಲ ಪಾಳುಭೂಮಿಯ ದೊರೆ ನಾನು. ಈಗ ನಾನು ಆ ಎಲ್ಲಾ ಭೂಮಿಯನ್ನು ನಿನಗೆ ಉಚಿತ ಬಳುವಳಿಯಾಗಿ ನೀಡುತ್ತೇನೆ. ಅದನ್ನು ಉತ್ತು ಬೆಳೆ ಬೆಳೆಯಿಸು." ಆ ಬಳಿಕ ತಮ್ಮ ಪ್ರಿಯ ಪುತ್ರಿಯನ್ನು ಅಗಲಲಾರದೆ ನರಿದಂಪತಿಗಳು ತುಂಬ ದುಃಖದಿಂದ ಅತ್ತುವು. ನೀರು ಆಹಾರವೊಂದನ್ನೂ ತೆಗೆದುಕೊಳ್ಳದೆ ಅಲ್ಲಿನ ಕಾಡು ಮೇಡುಗಳಲ್ಲೆಲ್ಲಾ ಓಡಾಡಿ ಕೊನೆಗೆ ಬೇರೆ ರಾಜ್ಯದ ಎಲ್ಲೆಯೊಳಗೆ ಸೇರಿಕೊಂಡವು ; ಏಕೆಂದರೆ ಸಂಪ್ರ ದಾಯದ ಪ್ರಕಾರ ಹೆಣ್ಣನ್ನು ದಾನಮಾಡಿದಮೇಲೆ, ಅಳಿಯನಿಂದ ಅವು ಆಹಾರ ವನ್ನಾಗಲೀ ನೀರನ್ನಾಗಲೀ ಸ್ವೀಕರಿಸುವಂತಿರಲಿಲ್ಲ.

ಇಷ್ಟನ್ನು ಹೇಳಿ ಸರಳದಾಸನು ಈ ಕಥೆಯನ್ನು ಮಹಾಭಾರತದ ಕಥೆಯೊಂದಿಗೆ ಸೇರಿಸುತ್ತಾನೆ. ಶ್ರೀಕೃಷ್ಣನ ಪತ್ನಿಯಾದ ಸತ್ಯಭಾಮೆಯು ತಂದೆ ಶಕ್ರಜಿತನ ಪೂರ್ವಿಕರಲ್ಲಿ ಒಬ್ಬನು ಅವನ ಪೂರ್ವಜನ್ಮದಲ್ಲಿ ಈ ನರಿಯಾಗಿದ್ದನು. ತನ್ನ ಮಗಳನ್ನು ಸ್ವಾರ್ಥವಿಲ್ಲದೆ ಹೀಗೆ ದಾನಮಾಡಿದುದರಿಂದಾದ ಧಾರ್ಮಿಕ ಪುಣ್ಯಸಂಚಯದಿಂದ ಅವನಿಗೆ ಉತ್ತಮ ಜನ್ಮ ಉಂಟಾಯಿತು. ಸ್ವಾರ್ಥವಿಲ್ಲದೆ ಹೆಣ್ಣನ್ನು ದಾನಮಾಡುವುದು ತುಂಬ ಪುಣ್ಯಕರವಾದ ಧಾರ್ಮಿಕ ಕಾರ್ಯ. ಆದರಿಂದ ದಾನಮಾಡಿದವನಿಗೆ ಮುಂದಿನ ಜನ್ಮದಲ್ಲಿ ಉತ್ತಮ ಜನ್ಮವುಂಟಾಗುತ್ತದೆ. ಈ ಕಥೆಯಲ್ಲಿ ಸರಳದಾಸನು ಮನದಟ್ಟು ಮಾಡುವ ವಿಷಯ ಇದು.

ಸರಳಮಹಾಭಾರತದ ಉದ್ಯೋಗಪರ್ವದಲ್ಲಿ ಕೌರವರಿಗೂ ಪಾಂಡವರಿಗೂ ಯುದ್ಧವಾಗದಿರುವಂತೆ ಮಾಡಲು ದುರ್ಯೋಧನನ ತಂದೆಯಾದ ಧೃತರಾಷ್ಟ್ರನು ಎಷ್ಟು ಪ್ರಯತ್ನಪಟ್ಟರೂ ಪರಸ್ಪರ ಒಪ್ಪಿಗೆಯಾಗಬಹುದಾದ ಯಾವ ಒಪ್ಪಂದಕ್ಕೂ ಒಪ್ಪದಂತೆ ತನ್ನ ಕುತಂತ್ರದಿಂದಲೂ ದುರುಪದೇಶದಿಂದಲೂ ಶಕುನಿಯು ದುರ್ಯೋಧನನ ಮನಸ್ಸನ್ನು ಕೆಡಿಸಿಬಿಟ್ಟಿದ್ದನು ಎಂದು ಕವಿಯು ಚಿತ್ರಿಸಿದ್ದಾನೆ. ರಾಯಭಾರಿಯಾದ ಶ್ರೀಕೃಷ್ಣನು ಕೇಳಿದ ಐದು ಹಳ್ಳಿಗಳನ್ನು ಪಾಂಡವರಿಗೆ ಕೊಟ್ಟು ಒಪ್ಪಂದ ಮಾಡಿಕೊಳ್ಳುವಂತೆ ಹೇಳಿದ ಧೃತರಾಷ್ಟ್ರನ ಬುದ್ಧಿವಾದವನ್ನು ಒಪ್ಪದೆ, ಕೂಡಲೇ ಯುದ್ಧವನ್ನು ಘೋಷಿಸಬೇಕೆಂದು ಶಕುನಿಯು ಹೇಳಿಕೊಟ್ಟನು. ಅವನು ಧೃತರಾಷ್ಟ್ರನನ್ನು ಆಷಾಢಭೂತಿಯೆಂದು ಕರೆದು ಕೌರವರ ಸಭೆಗೆ ಈ ಮುಂದಿನ ಕಥೆಯನ್ನು ಹೇಳಿದನು.

ಸೌರಾಷ್ಟ್ರ ದೇಶದಲ್ಲಿ ಒಂದಾನೊಂದು ಕಾಲದಲ್ಲಿ ಒಂದು ಮರದ ಮೇಲೆ ಒಂದು ಕೋತಿ ವಾಸಿಸುತ್ತಿತ್ತು. ಅದನ್ನು ಒಂದು ಹುಲಿನೋಡಿ ಅದರ ಮಾಂಸದ ರುಚಿಗಾಗಿ ಅದನ್ನು ಕೊಲ್ಲಬೇಕೆಂದು ಬಯಸಿತು. ಆದರೆ ಕಪಿಯು ಹುಲಿಯ ಚಲನವಲನಗಳನ್ನು ಗಮನಿಸಿ ಸ್ವಬುದ್ಧಿಯಿದ್ದುದರಿಂದ ಮರದಿಂದ ಕೆಳಗೆ ಇಳಿಯಲೇ ಇಲ್ಲ. ಹುಲಿಯು ವೈಷ್ಣವನ ರೂಪವನ್ನು ಹೊಂದಿ ಆ ಮರದ ಬಳಿಯಲ್ಲಿಯೇ ಇದ್ದ ವೈಷ್ಣವರಿಗೆ ಪವಿತ್ರವಾದ ತುಳಸಿಯ ಪೊದೆಗಳ ಬಳಿಯೇ ವಾಸಮಾಡತೊಡಗಿತು. ಹುಲಿಯು ಪ್ರತಿನಿತ್ಯವೂ ನೀರನ್ನಲ್ಲದೆ ಮತ್ತೇನನ್ನೂ ತೆಗೆದುಕೊಳ್ಳದಿರುವುದನ್ನು ಕಪಿಯು ಗಮನಿಸಿತು. ಹತ್ತಿರದಲ್ಲಿಯೇ ಹರಿಯುತ್ತಿದ್ದ ತೊರೆಗೆ ಪ್ರತಿನಿತ್ಯವೂ ಒಂದು ಸಾರಿ ಮಾತ್ರ ನೀರು ಕುಡಿಯುವುದಕ್ಕಾಗಿ ಹುಲಿ ಹೋಗುತ್ತಿತ್ತು, ಅಲ್ಲದೆ ಪ್ರತಿಹೆಜ್ಜೆಯಿಡುವಾಗಲೂ ನೆಲವನ್ನು ಊದಿ ಹೆಜ್ಜೆಯಿಡುತ್ತಿತ್ತು. ಹುಲಿಯ ಈ ಅಸಾಧಾರಣ ದೈವಭಕ್ತಿ ಮತ್ತು ನಡವಳಿಕೆಯಿಂದ ತುಂಬ ಪ್ರಭಾವಿತವಾಗಿ, ಕಪಿಯು ಒಂದು ದಿನ, ಹುಲಿಯು ಕಾಲಿಡುವುದಕ್ಕೆ ಮುಂಚೆ ನೆಲವನ್ನು ಊದುವುದಕ್ಕೆ ಕಾರಣವೇನು, ಎಂದು ಕೇಳಿತು. ಹುಲಿಯು ಹೇಳಿತು. '' ಈ ಲೋಕದೊಡನೆ ಎಲ್ಲ ಸಂಬಂಧವನ್ನೂ ಕಡಿದುಕೊಂಡು ನಾನು ವೈಷ್ಣವನಾಗಿದ್ದೇನೆ. ಆದುದರಿಂದಲೆ, ತುಳಸಿವನದ ಬಳಿ ವಾಸಿಸುತ್ತಾ ಗಾಳಿ ನೀರು ಎರಡನ್ನು ಬಿಟ್ಟು

ಬೇರೇನನ್ನೂ ಸ್ವೀಕರಿಸುವುದಿಲ್ಲ. ನಡೆಯುವಾಗ ನೆಲವನ್ನು ಊದುವುದೇಕೆಂದರೆ ನನಗೆ ಪ್ರಾಣಿಗಳನ್ನು ಕುರಿತ ಸಂಪೂರ್ಣ ಅನುಕಂಪೆಯಿದೆ. ನನ್ನ ಕಾಲಿನ ಕೆಳಗೆ ಯಾವ ಕ್ರಿಮಿ ಕೀಟಗಳು ಸಾಯಬಾರದಷ್ಟೆ!''

ಕಪಿಗೆ ಹುಲಿಯ ಪ್ರಾಮಾಣಿಕತೆಯ ಬಗ್ಗೆಯೂ ಅದರ ಪರಮ ಧಾರ್ಮಿಕ ಬುದ್ಧಿಯ ಬಗ್ಗೆಯೂ ದೃಢವಾದ ನಂಬಿಕೆಯುಂಟಾಗಿ ತನ್ನನ್ನು ಶಿಷ್ಯನನ್ನಾಗಿ ಸ್ವೀಕರಿಸ ಬೇಕೆಂದು ಹುಲಿಯನ್ನು ಕೇಳಿಕೊಂಡಿತು. ಈ ಪ್ರಾರ್ಥನೆಯನ್ನು ಹುಲಿಯು ಕೂಡಲೇ ಅಂಗೀಕರಿಸಿತು. ಕಪಿಯು ಮರದಿಂದ ಇಳಿದು ಹುಲಿಯ ಪಾದಗಳಿಗೆ ನಮಸ್ಕರಿಸಿ ದೊಡನೆಯೇ ಹುಲಿಯು ಅದರ ಮೇಲೆ ಹಾರಿ ಅದರ ಕೊರಳನ್ನು ಮುಷ್ಟಿಯಲ್ಲಿ ಹಿಡಿದು ಕೊಂಡಿತು. ಕಪಿಯು ತನ್ನ ಅಪಾರವಾದ ನೋವಿನಲ್ಲಿ 'ನೀನು ನಿಜವಾದ ವೈಷ್ಣವನೇ?' ಎಂದು ಕೇಳಿತು. ಜೋರಾಗಿ ನಗುವುದಕ್ಕಾಗಿ ಹುಲಿಯು ಕೈ ಹಿಡಿತವನ್ನು ಸಡಿಲ ಮಾಡಿದಾಗ ಕಪಿಯು ನುಣುಚಿಕೊಂಡು ಓಡಿ ಮರವನ್ನು ಮತ್ತೆ ಹತ್ತಿಕೊಂಡಿತು.

ಈ ಕಥೆಯನ್ನು ಕೇಳಿ ಕೌರವರೆಲ್ಲ ನಕ್ಕರು. ಆದರೆ ಧೃತರಾಷ್ಟ್ರನಿಗೆ ಇದರಿಂದ ತುಂಬ ಖೇದವುಂಟಾಗಿ ನೋವನ್ನನುಭವಿಸಿದನು. ಅವನು ಶಕುನಿಯನ್ನು ಆಷಾಢಭೂತಿ ಯೆಂದೂ ಪಿತೂರಿಗಾರನೆಂದೂ ಕರೆದು ಕೌರವರೆಲ್ಲರಿಗೆ ಈ ಕೆಳಗಿರುವ ಕಥೆಯನ್ನು ಹೇಳಿದನು.

ಒಂದಾನೊಂದು ಕಾಲದಲ್ಲಿ ಅನೇಕ ಜಲಚರಗಳು ವಾಸಮಾಡುತ್ತಿದ್ದ ಕೆರೆಯೊಂದರ ಪಕ್ಕದಲ್ಲಿದ್ದ ಆಲದಮರದ ಮೇಲೆ ಒಂದು ಕೊಕ್ಕರೆ ವಾಸವಾಗಿತ್ತು. ಅದು ಕೆರೆ ಯೊಳಗಿನ ಮೀನು ಮುಂತಾದ ಜಲಚರಗಳನ್ನು ಒಂದೊಂದಾಗಿ ತಿನ್ನಲು ಅಪೇಕ್ಷಿಸಿತು. ಅದಕ್ಕಾಗಿ ಅದು ಒಂದು ಉಪಾಯವನ್ನು ಹುಡುಕಿತು. ತನ್ನ ಕೊಕ್ಕಿಗೆ ಒಂದು ಸ್ವಲ್ಪ ಹತ್ತಿಯನ್ನು ಸುತ್ತಿಕೊಂಡು ಪ್ರತಿ ಸಂಜೆಯೂ ಒಮ್ಮೆ ಮಾತ್ರ ಆ ಹತ್ತಿಯ ಮೂಲಕ ನೀರನ್ನು ಸೆಳೆದು ಕುಡಿಯುತ್ತಿತ್ತು. ಅನೇಕ ದಿನಗಳು ಇದೇ ರೀತಿಯಲ್ಲಿ ನೀರನ್ನಲ್ಲದೆ ಬೇರೇನನ್ನೂ ಕೊಕ್ಕರೆಯು ತೆಗೆದುಕೊಳ್ಳಲಿಲ್ಲ. ಜಲಚರ ಪ್ರಾಣಿಗಳಿಗೆ ಕೊಕ್ಕರೆಯ ಈ ನಡವಳಿಕೆ ಅಸಾಧಾರಣವಾಗಿ ಕಂಡುಬಂದಿತು. ಒಂದು ದಿನ ಕೆಲವು ಪ್ರಾಣಿಗಳು ಹತ್ತಿಯ ಮೂಲಕ ಕೊಕ್ಕರೆಯು ನೀರನ್ನು ಕುಡಿಯುವುದಕ್ಕೆ ಕಾರಣವನ್ನು ಧೈರ್ಯದಿಂದ ಕೇಳಿ ದುವು. ತನಗೆ ಪ್ರಾಣಿಗಳ ಬಗ್ಗೆ ಅಧಿಕ ಅನುಕಂಪ ಇರುವುದಾಗಿಯೂ ನೀರು ಕುಡಿ ಯುವಾಗ ಯಾವ ಜಲಚರಗಳಿಗೂ ಅಪಾಯವುಂಟಾಗಬಾರದೆಂದೂ ಯಾವ ಸೂಕ್ಷ್ಮ ಜಲಚರವೂ ತನ್ನ ಹೊಟ್ಟೆಯೊಳಕ್ಕೆ ಹೋಗಬಾರದೆಂದೂ, ಹತ್ತಿಯ ಮೂಲಕ ನೀರನ್ನು ಹೀರಿಕೊಳ್ಳುವುದರಿಂದ ನೀರಿನೊಡನೆ ಯಾವ ಸೂಕ್ಷ್ಮಜೀವಿಯೂ ತಾನು ಕುಡಿಯುವ ನೀರಿನಲ್ಲಿ ಬರುವದಿಲ್ಲವೆಂದೂ ಕೊಕ್ಕರೆ ಹೇಳಿತು. ಕೊಕ್ಕರೆಯ ಅಸಾಧಾರಣ ಧಾರ್ಮಿಕ ಬುದ್ಧಿಯಿಂದ ಪ್ರಭಾವಗೊಂಡ ಜಲಚರಗಳು, ಕೊಕ್ಕರೆಯ ಬಳಿಯೇ ಯಾವ ಹೆದರಿ ಕೆಯೂ ಇಲ್ಲದೆ ಸುಳಿದಾಡತೊಡಗಿದವು.

ಹೀಗೆ ಕೆಲವು ದಿನ ಕಳೆಯಿತು. ಒಂದು ದಿನ ಇದ್ದಕಿದ್ದಂತೆ ಕೊಕ್ಕರೆಯು ಈ ಕೆರೆಯನ್ನು ಬಿಟ್ಟು ಬೇರೆ ಕಡೆಗೆ ಹೋಗುವ ನಿರ್ಧಾರವನ್ನು ಕೈಗೊಂಡು ಅದನ್ನು ಆ ಕೆರೆಯಲ್ಲಿ ವಾಸಿಸುತ್ತಿದ್ದ ಪ್ರಾಣಿಗಳಿಗೆ ತಿಳಿಸಿತು. ಇಂಥ ದೈವಭಕ್ತಿಯುಳ್ಳ ಪಕ್ಷಿಯು ಕೆರೆಯನ್ನು ಬಿಟ್ಟು ಹೊರಟುಹೋಗುವುದನ್ನು ಕೇಳಿದ ಜಲಚರಗಳು ದುಃಖಪಟ್ಟು ಕೊಕ್ಕರೆಯು ಈ ನಿರ್ಧಾರಕ್ಕೆ ಕಾರಣವೇನೆಂದು ಕೇಳಿದುವು. ಇಷ್ಟರಲ್ಲಿಯೇ ಹನ್ನೆರಡು ವರುಷಗಳ ಬರ ಬರುವುದಾಗಿಯೂ ಆಗ ಎಲ್ಲ ಕೆರೆಗಳೂ ಕೊಳಗಳೂ ಬತ್ತಿ ಹೋಗುವುದಾಗಿಯೂ ಆದುದರಿಂದ ತಾನು ಬಹು ಆಳವಾದ ನೀರುಳ್ಳ ಮಾನಸಸರೋವರಕ್ಕೆ ಹೋಗುವುದಾಗಿಯೂ ಕೊಕ್ಕರೆ ವಿವರಿಸಿತು. ಕೆರೆಯಲ್ಲಿದ್ದ ಜಲಚರಗಳು ತಮ್ಮನ್ನೂ ಮಾನಸಸರೊವರಕ್ಕೆ ಕರೆದುಕೊಂಡು ಹೋಗಬೇಕೆಂದು ಕೇಳಿಕೊಂಡಾಗ ಕೊಕ್ಕರೆಯು ಅದಕ್ಕೆ ಒಪ್ಪಿಕೊಂಡಿತು. ಇದರಂತೆಯೇ ಅವುಗಳನ್ನು ಒಂದೊಂದಾಗಿ ಕಚ್ಚಿಕೊಂಡು ಹೋಗಿ ಹತ್ತಿರದಲ್ಲಿದ್ದ ಮರದ ಮೇಲೆ ಕುಳಿತು ಅವುಗಳನ್ನು ತಿನ್ನುತ್ತಿತ್ತು. ಕೊನೆಯದಾಗಿ ಒಂದು ಏಡಿಯ ಸರದಿ ಬಂತು. ಮರದ ಕೆಳಗೆ ಬಿದ್ದಿದ್ದ ಮೂಳೆಯ ರಾಶಿಯನ್ನು ಕಂಡು ಏಡಿಗೆ ಕೊಕ್ಕರೆಯ ಉಪಾಯ ಅರ್ಥವಾಯಿತು. ಕೊಕ್ಕರೆಯು ಏಡಿಯನ್ನು ತಿನ್ನಲು ಪ್ರಯತ್ನಪಟ್ಟಾಗ ತನ್ನ ಚೂಪಾದ ಮೂತಿಯಿಂದ ಕೊಕ್ಕರೆಯ ಕೊರಳನ್ನು ಕತ್ತರಿಸಿ ಬಿಟ್ಟಿತು.

ಈ ಕಥೆಯನ್ನು ಕೇಳಿ ಕೌರವರೆಲ್ಲ ಗಟ್ಟಿಯಾಗಿ ನಕ್ಕರು.

ಈ ಮೇಲಿನ ಎರಡು ಕಥೆಗಳಂತೆಯೇ ಇರುವ ಎರಡು ಕಥೆಗಳು ಪಂಚತಂತ್ರದಲ್ಲಿ ಬರುತ್ತವೆ. ಇವುಗಳನ್ನು ಸರಳದಾಸನು ಪಂಚತಂತ್ರದಿಂದ ತೆಗೆದುಕೊಂಡು ತನಗೆ ಹೇಗೆ ಬೇಕೋ ಹಾಗೆ ವ್ಯತ್ಯಾಸಮಾಡಿಕೊಂಡಿರುವಂತೆ ಕಂಡುಬರುತ್ತದೆ. ಈ ಎರಡು ಕಥೆಗಳಲ್ಲಿಯೂ ಅವನು ಅತಿ ಧಾರ್ಮಿಕಬುದ್ಧಿಯನ್ನು ಹೀಯಾಳಿಸಿ, ಪ್ರಾಣಿಜೀವನದ ಬಗ್ಗೆ ಮತೀಯ ಪಂಥಗಳನ್ನು ಹೊಂದಿರುವ ಅತಿ ಅನುಕಂಪ ದೃಷ್ಟಿಯನ್ನು ಹಾಸ್ಯಮಾಡುವಂತಿದೆ.

ಸರಳಮಹಾಭಾರತದಲ್ಲಿ ಬರುವ ಕಥೆಗಳ ವಿಧಗಳ ಬಗ್ಗೆ ಓದುಗರಿಗೆ ಸ್ವಲ್ಪ ವಿವರಗಳನ್ನು ನೀಡಿ, ಇನ್ನೂ ಅದರಲ್ಲಿ ಕಂಡುಬರುವ ವಿವಿಧವಾದ ತಿಳಿವಳಿಕೆಯನ್ನು ಪರಿಚಯ ಮಾಡಲು ತೊಡಗುತ್ತೇವೆ. ಆ ಗ್ರಂಥದ ಬೇರೆ ಬೇರೆ ಭಾಗಗಳಲ್ಲಿ, ಬೇರೆ ಬೇರೆ ಸಂದರ್ಭಗಳಲ್ಲಿ ಈ ವಿಷಯಗಳು ಬರುತ್ತವೆ. ನಮ್ಮ ಅನುಕೂಲಕ್ಕೋಸ್ಕರ ನಾವು ಆ ವಿಷಯಗಳನ್ನು ಒಂದೆಡೆ ಕೂಡಿಸಿ ಹೇಳುತ್ತೇವೆ.

ಅನೇಕ ಸಂದರ್ಭಗಳಲ್ಲಿ ಸರಳದಾಸನು ತನ್ನ ಕಾಲದಲ್ಲಿ ಯಾವುದನ್ನು ಪಾಪವೆಂದು ಕರೆಯುತ್ತಿದ್ದರೋ ಅವುಗಳನ್ನು ನಿರೂಪಿಸುತ್ತಾನೆ. ಅವುಗಳನ್ನು ಚೆನ್ನಾಗಿ ಪರೀಕ್ಷಿಸಿದರೆ ಅವು ಅಲ್ಪಾಪರಾಧಗಳೆಂದು ವಿಧಿಗಳ ಅತಿಕ್ರಮಣಗಳೆಂದೂ ಕಂಡುಬರುತ್ತವೆ. ಅವನ ಪ್ರಕಾರ ಈ ಕೆಳಗೆ ಹೇಳಿರುವವರೆಲ್ಲ ಪಾಪಿಗಳು :

ದೇವತೆಗಳಿಗೂ ಪಿತೃಗಳಿಗೂ ತಮ್ಮಲ್ಲಿರುವ ಅತ್ಯುತ್ತಮ ವಸ್ತುಗಳನ್ನು ಅರ್ಪಿಸದವರು ; ದೇವಸ್ವಾಮ್ಯಗಳನ್ನು ಅಪಹರಿಸುವವರು ; ಬಡವರಿಗೆ ತಮ್ಮ ಕೈಲಾದ ದಾನವನ್ನು ಮಾಡದವರು ; ಸೂರ್ಯಗ್ರಹಣ ಚಂದ್ರಗ್ರಹಣಗಳ ಸಮಯದಲ್ಲಿ ಊಟ ಮಾಡುವವರು ; ದುಷ್ಟವ್ಯವಹಾರದವರೊಡನೆ ಓಡಾಡುವವರು ; ತಮಗೆ ಸಾಮರ್ಥ್ಯವಿದ್ದರೂ ತಮ್ಮ ಜೀವನೋಪಾಯವನ್ನು ತಾವೇ ಸಂಪಾದಿಸದವರು ; ಬಡವರ ಮೇಲೆ ಕರುಣೆಯಿಲ್ಲದವರು ; ತಮ್ಮ ಮೇಲಿನವರನ್ನು ಗೌರವಿಸದವರು ; ದೇವತೆಗಳಿಗೆ ಗೌರವವನ್ನು ತೋರಿಸದವರು ; ತಾವೇ ಸಿರಿವಂತರಾಗಿದ್ದರೂ ಇತರರ ಆಸ್ತಿಯ ಮೇಲೆ ಕಣ್ಣಿಡುವವರು ; ಪರಸ್ತ್ರೀ, ಪರಧನವನ್ನು ಅಪಹರಿಸುವವರು : ಗೋಮಾಳಗಳನ್ನು ಉಳುವವರು ; ಮದುವೆಯಾದವಳನ್ನು ಬಿಡುವವರು ; ಒಬ್ಬನ ಧರ್ಮಪತ್ನಿಯನ್ನು ಇತರರು ಅಪಹರಿಸಲು ಅವಕಾಶಕೊಡುವವರು ; ಗೋಹತ್ಯೆ ಮಾಡುವವರು; ಚಾಂದ್ರಮಾನದ ಶುಕ್ಲಪಕ್ಷದ ಚೌತಿ, ಪಂಚಮಿ, ಸಪ್ತಮಿ, ದಶಮಿ ಮತ್ತು ಏಕಾದಶಿಗಳಲ್ಲಿ ಮಾಂಸಾಹಾರ ಮಾಡುವವರು ; ಕೀಳುಜಾತಿಯ ಹೆಂಗಸರೊಡನೆ ಸಂಭೋಗ ಮಾಡುವವರು ; ಹೆಂಗಸರನ್ನು ವ್ಯಾಪಾರದ ವಸ್ತುಗಳನ್ನಾಗಿ ಮಾಡಿರುವವರು ; ಬ್ರಾಹ್ಮಣರಾಗಿದ್ದರೂ ಅತೃಪ್ತಿಯಿಂದ ಕೂಡಿರುವವರು ; ಗೌರವ ಸ್ಥಾನದಲ್ಲಿರುವ ಹಿರಿಯ ಸ್ತ್ರೀಯರ ಮೇಲೆ ಕಣ್ಣುಹಾಕುವವರು ; ಕಾರಣವಿಲ್ಲದೆ ಪ್ರಜೆಗಳನ್ನು ಸೆರೆಗೆ ಹಾಕುವ ರಾಜರು ; ಪವಿತ್ರ ಗ್ರಂಥಗಳನ್ನು ಅರ್ಥಮಾಡಿಕೊಳ್ಳದೆ ಮತಧರ್ಮಗಳನ್ನು ಹಳಿಯುವವರು ; ತಮ್ಮ ಮನೆ ಬಾಗಿಲಿಗೆ ಬಂದ ಭಿಕ್ಷುಕರನ್ನು ಓಡಿಸುವವರು ; ಉಪವಾಸದ ದಿನಗಳಲ್ಲಿ ಹೆಂಡತಿಯೊಡನೆ ಸಂಭೋಗಮಾಡುವವರು. ಪುಷ್ಪವತಿಯರಾದ ಹೆಂಗಸರೊಡನೆ ಸಂಭೋಗಮಾಡುವವರು ; ನೆರೆಹೊರೆಯವರ ಸಿರಿಯನ್ನು ನೋಡಿ ಕರುಬುವವರು ; ಸುಳ್ಳು ಹೇಳಿ ಇತರರಿಗೆ ತೊಂದರೆಗಳನ್ನು ಉಂಟುಮಾಡುವವರು ; ದಾನಮಾಡುವಾಗ ಮನಸ್ಸಿಲ್ಲದೆ ದಾನಮಾಡುವವರು ; ಗೂಳಿಗಳನ್ನು ಹೂಡಿ ಭೂಮಿಯನ್ನು ಉಳುವವರು ; ಕರುಗಳು ತಮ್ಮ ಹಸುಗಳ ಹಾಲನ್ನು ಐವತ್ತು ದಿನಗಳ ತನಕ ಪೂರ್ತಿಯಾಗಿ ಕುಡಿಯಲು ಬಿಡದಿರುವವರು ; ಶತ್ರುಗಳು ಶರಣಾಗತರಾದ ಮೇಲೆಯೂ ಅವರನ್ನು ಪ್ರಾಣಸಹಿತ ಉಳಿಸದವರು ; ಸಿರಿವಂತರಾಗಿದ್ದರೂ ಕುಟುಂಬದವರಿಗೆ ತೃಪ್ತಿಕರವಾಗುವಂತೆ ಆಹಾರ ನೀಡದವರು ;ಯುದ್ಧದಲ್ಲಿ ಹೇಡಿಗಳಾಗುವವರು;ಬ್ರಾಹ್ಮಣರಾಗಿದ್ದರೂ ನೀರಿಗೆ ಹೆದರುವವರು. ಬೆಂಕಿಗೆ ಹೆದರುವ ಸ್ತ್ರೀಯರು ; ಬ್ರಹ್ಮಹತ್ಯೆಯನ್ನೂ ದೇವವಿಗ್ರಹಭಂಗವನ್ನೂ ಮಾಡುವವರು ; ಕೋಪದಲ್ಲಿ ಹೆಂಗಸರನ್ನು ಕೊಲ್ಲುವವರು ; ಆತ್ಮಹತ್ಯೆಮಾಡಿಕೊಳ್ಳುವವರು ; ಸಂಬಂಧಿಗಳಾದ ಹಿರಿ ವಯಸ್ಸಿನ ಸ್ತ್ರೀಯರೊಡನೆ ಸಂಭೋಗಮಾಡುವವರು ; ತಮ್ಮ ಪತ್ನಿಯರನ್ನು ಬಿಟ್ಟು ಇತರರೊಡನೆ ಸಂಭೋಗಮಾಡುವವರು ; ತಮ್ಮ ಜಾತಿಯನ್ನು ಮುಚ್ಚಿಡುವವರು ; ಬ್ರಾಹ್ಮಣ ವಿಧವೆಯರೊಡನೆ ಸಂಭೋಗಮಾಡುವವರು ; ಹಣದಾಸೆಗಾಗಿ ತಮ್ಮ ವಾಸದ ಗೃಹವನ್ನು ಮಾರುವವರು ; ಸ್ನೇಹದ ಮರೆಯಲ್ಲಿ ಪ್ರಾಣಹತ್ಯಮಾಡುವ

ವರು ; ಹೊಗಳಿಕೆಯಿಂದ ಜೀವನೋಪಾಯ ಮಾಡುವವರು ; ಗಾಳಹಾಕಿ ಮೀನು ಗಳನ್ನು ಕೊಲ್ಲುವವರು ; ಮದುವೆಯ ಬಂಧನವನ್ನು ತೊರೆಯುವವರು ; ಮದ್ಯಪಾನ ಮಾಡುವ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು ; ದಾರಿಯಲ್ಲಿ ಹಳ್ಳತೆಗೆದು ಮುಳ್ಳುಹಾಕುವವರು ; ಆಹಾರದಲ್ಲಿ ವಿಷವನ್ನು ಬೆರಸುವವರು ; ಇತರರ ಮನೆಗೆ ಬೆಂಕಿಯನ್ನು ಹೊತ್ತಿಸುವವರು ; ಇತರರನ್ನು ಯಾವಾಗಲೂ ಬೈಯುತ್ತಿರುವವರು ; ದಾರಿಯ ಇಕ್ಕೆಲಗಳಲ್ಲಿರುವ ಸಾಲುಮರಗಳನ್ನು ಕಡಿಯುವವರು ಇತ್ಯಾದಿ.

ಜಯದ್ರಥನನ್ನು ಕೊಲ್ಲಲು ಅರ್ಜುನನು ಮಾಡಿದ ಪ್ರತಿಜ್ಞೆಯ ಸಮಯದಲ್ಲಿ ಮೇಲೆ ಹೇಳಿದ ಮಾತುಗಳಲ್ಲಿ ಅನೇಕವನ್ನು ಹೆಸರಿಸಲಾಗಿದೆ.

ಸರಳದಾಸನು ಬೇರೆ ಬೇರೆ ಬಗೆಯ ನಿಂದಕರನ್ನು ವಿವರಿಸಿ ಆಯಾ ನಿಂದೆಗಳಿಗೆ ಅವರು ಅನುಭವಿಸಬೇಕಾದ ಶಿಕ್ಷೆಗಳನ್ನು ಕೂಡ ವಿವರಿಸಿದ್ದಾನೆ. ಅವನು ಹೇಳುತ್ತಾನೆ: ದೇವತೆಗಳನ್ನು ಬೈಯುವವರು ನರಕಕ್ಕೆ ಹೋಗುತ್ತಾರೆ; ಬ್ರಾಹ್ಮಣರನ್ನು ನಿಂದಿಸು ವವರು ಮಕ್ಕಳಿಲ್ಲದವರಾಗುತ್ತಾರೆ; ಸಂನ್ಯಾಸಿಗಳನ್ನು ನಿಂದಿಸುವವರು ಕೃಶರಾಗುತ್ತಾರೆ; ಗುರುಗಳನ್ನು ನಿಂದಿಸುವವರು ವಿದ್ವಾಂಸರಾಗುವುದಿಲ್ಲ; ತಂದೆಯನ್ನು ನಿಂದಿಸುವವರು ಭ್ರಮೆಗೊಳಗಾಗುತ್ತಾರೆ; ತಾಯಿಯನ್ನು ನಿಂದಿಸುವವರು ಅನೇಕ ಗಂಡಾಂತರಗಳಿಗೆ ಒಳಗಾಗುತ್ತಾರೆ; ವೈದ್ಯರನ್ನು ನಿಂದಿಸುವವರು ತಲೆಮಾರಿನಿಂದ ತಲೆಮಾರಿಗೆ ರೋಗಿ ಗಳಾಗುತ್ತ ಹೋಗುತ್ತಾರೆ; ಗಂಡನನ್ನು ನಿಂದಿಸುವವರು ಬಹಿರಂಗವಾಗಿ ಅಪಮಾನಕ್ಕೆ ಒಳಗಾಗುತ್ತಾರೆ; ಪವಿತ್ರ ಗ್ರಂಥಗಳನ್ನು ನಿಂದಿಸುವವರು ಆಯಾ ಗ್ರಂಥಗಳ ಜ್ಞಾನ ವನ್ನು ಕಳೆದುಕೊಳ್ಳುತ್ತಾರೆ; ಸಮುದ್ರನಿಂದಕರು ಕುಷ್ಟರೋಗಿಗಳಾಗುತ್ತಾರೆ; ಲಕ್ಷ್ಮೀ ದೇವಿಯನ್ನು ನಿಂದಿಸುವವರು ಎಲ್ಲ ಜನ್ಮಗಳಲ್ಲೂ ದರಿದ್ರರಾಗುತ್ತಾರೆ; ಸರಸ್ವತಿಯನ್ನು ನಿಂದಿಸುವವರು ನಿರಕ್ಷರಕುಕ್ಷಿಗಳಾಗುತ್ತಾರೆ ; ಸ್ನೇಹಿತರನ್ನು ನಿಂದಿಸುವವರು ಅಜ್ಞಾನಿ ಗಳಾಗುತ್ತಾರೆ; ಔಷಧಗಳನ್ನು ನಿಂದಿಸುವವರು ರೋಗಿಗಳಾಗುತ್ತಾರೆ; ಗೋವುಗಳನ್ನು ನಿಂದಿಸುವವರು ಸುಗ್ಗಿಯ ಲಾಭವನ್ನು ಕಳೆದುಕೊಳ್ಳುತ್ತಾರೆ; ಮಕ್ಕಳನ್ನು ನಿಂದಿಸು ವವರಿಗೆ ಮಕ್ಕಳಾಗುವುದಿಲ್ಲ; ಪತಿವ್ರತೆಯರಾದ ತಮ್ಮ ಪತ್ನಿಯರನ್ನು ನಿಂದಿಸುವವರು ಜೀವನೋಪಾಯದ ಸ್ಥಿತಿಗತಿಯನ್ನು ಕಳೆದುಕೊಳ್ಳುತ್ತಾರೆ; ಮಹಾತ್ಮರನ್ನು ನಿಂದಿಸು ವವರು ಅನೇಕ ಪಾಪಗಳನ್ನು ಮಾಡುತ್ತಾರೆ; ನೀರನ್ನು ನಿಂದಿಸುವವರು ಹೊಟ್ಟೆನೋವ ನ್ನನುಭವಿಸುತ್ತಾರೆ; ಒಳ್ಳೆಯ ಭೋಜನವನ್ನು ನಿಂದಿಸುವವರು ಮತ್ತೆ ಅಂಥ ಭೋಜನ ವನ್ನು ಪಡೆಯುವುದಿಲ್ಲ; ಇತರರ ಪತ್ನಿಯರನ್ನು ನಿಂದಿಸುವವರು ಎಲ್ಲ ಜನ್ಮಗಳಲ್ಲೂ ಬಡವರಾಗುತ್ತಾರೆ; ಉತ್ತಮ ವಸ್ತುಗಳ ನಿಂದಕರಿಗೆ ಮತ್ತೆ ಅಂಥ ವಸ್ತುಗಳು ದೊರಕುವು ದಿಲ್ಲ.

ತನ್ನ 'As you Like It' ಎಂಬ ನಾಟಕದಲ್ಲಿ ಶೇಕ್ಸ್‌ಪಿಯರನು ಮಾನವನ ಬಾಳಿನ ಏಳು ಅವಸ್ಥೆಗಳನ್ನು ವಿವರಿಸಿರುವಂತೆ ಸರಳದಾಸನು ಅವನ ಮಹಾಭಾರತ ದಲ್ಲಿ ಮಾನವನ ಬಾಳಿನ ವಿವಿಧ ಹಂತಗಳನ್ನು ವಿವರಿಸಿದ್ದಾನೆ. ಅವನು ಹೇಳುತ್ತಾನೆ :

ಹದಿನೈದು ವರ್ಷದ ತನಕ ಮಾನವನು ಇನ್ನೂ ಹುಡುಗಾಟಿಕೆಯಲ್ಲಿ ನಿರತನಾಗಿರು ತ್ತಾನೆ. ಇಪ್ಪತ್ತನೆಯ ವರ್ಷದಲ್ಲಿ ಅವನು ಹೆಣ್ಣಿನೊಡನೆ ಸಂಭೋಗವನ್ನು ಅಪೇಕ್ಷಿಸು ತ್ತಾನೆ. ಇಪ್ಪತ್ತೈದರಿಂದ ಮೂವತ್ತೈದರ ತನಕ ಸುಂದರವಾಗಿ ಕಾಣುತ್ತಾನಲ್ಲದೆ, ಯಾರನ್ನೂ ಲಕ್ಷಿಸುವುದಿಲ್ಲ; ಸದಾ ಹೆಂಗಸರ ಸಹವಾಸವನ್ನು ಬಯಸುತ್ತಾನೆ. ಮೂವ ತ್ತೈದನೆಯ ವರ್ಷವಾದ ಮೇಲೆ ಒಂದು ನೆಲೆಗೆ ನಿಂತು ವಿವೇಕವನ್ನು ಹೊಂದಿ ಮಕ್ಕ ಳನ್ನು ಹೊಂದಲು ಅಪೇಕ್ಷೆಪಡುತ್ತಾನೆ. ನಲವತ್ತನೆಯ ವರ್ಷದ ವೇಳೆಗೆ ಅವನ ಬುದ್ಧಿ ಶಕ್ತಿಯು ಪರಿಣತಾವಸ್ಥೆಯನ್ನೂ ಮುಟ್ಟುತ್ತದೆ; ಅವನು ದೇವತೆಗಳಿಗೂ ಬ್ರಾಹ್ಮಣ ರಿಗೂ ತಂದೆತಾಯಿಗಳಿಗೂ ಗೌರವವನ್ನು ತೋರಿಸುತ್ತಾನೆ. ಐವತ್ತು ವರ್ಷವಾದ ಮೇಲೆ ಹೆಂಗಸಿನೊಡನೆ ಸಂಭೋಗವನ್ನು ಕಡಮೆ ಮಾಡುತ್ತಾನೆ. ಅರುವತ್ತು ವರ್ಷದ ವೇಳೆಗೆ ಹೆಂಗಸಿನ ಮೇಲಿನ ಅಪೇಕ್ಷೆ ಅತ್ಯಲ್ಪ ಪ್ರಮಾಣಕ್ಕೆ ಇಳಿಯುತ್ತದೆ. ಎಪ್ಪತ್ತು ಆಗುವ ವೇಳೆಗೆ ಅವನ ಸಾಮರ್ಥ್ಯವು ಕುಗ್ಗಿ ಅವನ ಸ್ಮರಣ ಶಕ್ತಿಯು ಕಡಮೆಯಾಗುತ್ತಾ ಹೋಗುತ್ತದೆ. ಎಂಬತ್ತರ ವೇಳೆಗೆ ಮರೆವು ಮುಸುಕುತ್ತದೆ ಮತ್ತು ಮಕ್ಕಳನ್ನು ಪಡೆ ಯುವ ಶಕ್ತಿಯಿರುವುದಿಲ್ಲ. ತೊಂಬತ್ತರ ವೇಳೆಗೆ ತನ್ನ ಬಂಧುಗಳನ್ನು ಗುರುತಿಸುವುದೇ ಕಷ್ಟವಾಗುತ್ತದೆ. ನೂರನೆಯ ವರ್ಷಕ್ಕೆ ಅವನ ಎರಡನೆಯ ಬಾಲ್ಯಾವಸ್ಥೆ ಪ್ರಾರಂಭ ವಾಗುತ್ತದೆ.

ಸರಳ ಮಹಾಭಾರತದ ಶಾಂತಿಪರ್ವದಲ್ಲಿ ಯುಧಿಷ್ಠಿರನಿಗೆ ಭೀಷ್ಮನು ನೀಡುವ ಉಪದೇಶವಾಕ್ಯಗಳಲ್ಲಿ ಕೆಲವು ಹೀಗಿವೆ:

"ಎಲೈ, ಯುಧಿಷ್ಠಿರನೇ ರಾಜ್ಯವನ್ನು ಧರ್ಮದಿಂದ ಆಳು. ಇಲ್ಲದಿದ್ದರೆ ನೀನು ಅದನ್ನು ಕಳೆದುಕೊಳ್ಳುತ್ತೀಯೆ. ಯಾರೂ ಅಸುಖಿಗಳಾಗದಂತೆ ರಾಜ್ಯಭಾರವನ್ನು ಮಾಡು. ಪ್ರಜೆಗಳ ಸೌಖ್ಯವೇ ದೊರೆಗಳ ಸೌಖ್ಯವೆಂಬುದನ್ನು ಸ್ಪಷ್ಟವಾಗಿ ತಿಳಿದುಕೋ. ರಾಜನು ತನ್ನ ಪ್ರಜೆಗಳಿಗೆ ನ್ಯಾಯವನ್ನು ನೀಡುವಲ್ಲಿ ಸರ್ವಸಮಾನತೆಯನ್ನು ತೋರಿಸಿ ದರೆ ದೇವೇಂದ್ರನು ಮಳೆ ಸುರಿಸುತ್ತಾನೆ. ಪ್ರಜೆಗಳು ಸುಖಿಗಳಾದರೆ ರಾಜನ ಆಯಸ್ಸು ವರ್ಧಿಸುತ್ತದೆ. ಅಪರಾಧಿಗಳಿಗೆ ಸರಿಯಾದ ವಿಚಾರಣೆಯಾದ ಮೇಲೆ ಶಿಕ್ಷೆಯನ್ನು ವಿಧಿಸು. ಗೂಢಚಾರರ ಮೂಲಕ ಸತ್ಯಾಂಶವನ್ನು ತಿಳಿದುಕೋ. ದೇಶದ್ರೋಹಿಗಳ ತಲೆಯನ್ನು ಕತ್ತರಿಸಿ ಹಾಕು. ಕೇಡಿಗರನ್ನು ಶಿಕ್ಷಿಸುವುದು ತಪ್ಪಲ್ಲವೆಂಬುದನ್ನು ಖಂಡಿತ ವಾಗಿ ತಿಳಿದುಕೋ. ಇಪ್ಪತ್ತು ಮೊಳದ ದಂಡವನ್ನು ತಯಾರಿಸಿ ಅದರಿಂದ ಭೂಮಿ ಯನ್ನು ಅಳೆಸು. ಇಪ್ಪತ್ತೈದು 'ಗಂಟೆ'ಗಳಿಗೆ ಒಂದು 'ಮಾನ'*ವಾಗುತ್ತದೆ. ಇಪ್ಪತ್ತು 'ಮಾನ'ಗಳಿಗೆ ಒಂದು 'ವಾಟಿ'. ಒಂದು 'ವಾಟಿ' ಭೂಮಿಗೆ ನಿನ್ನ ಪ್ರಜೆಗಳಿಂದ ಒಂದು ಸುವರ್ಣದ 'ಚೀನ'ವನ್ನು ತೆರಿಗೆಯಾಗಿ ತಡೆದುಕೋ. ಆಗ ಪ್ರಜೆಗಳು ತುಂಬ ಸುಖಿ

* ಒಂದು 'ಮಾನ' ಎಂದರೆ ಒಂದು ಎಕರೆಗಿಂತ ಸ್ವಲ್ಪ ಕಡಮೆಯಾಗುತ್ತದೆ.

ಗಳಾಗಿ ನಿನಗೆ ದೀರ್ಘವಾದ ಆಯುಸ್ಸನ್ನು ಬಯಸುತ್ತಾರೆ. ರಾಜ್ಯದ ಎಲ್ಲೆಡೆಗಳಿಂದಲೂ ಸುದೇಶವಾಹಕರಿಂದ ವರ್ತಮಾನಗಳನ್ನು ತರಿಸಿಕೊಳ್ಳುತ್ತಿರಬೇಕು. ದಂಗೆಯೆದ್ದವರನ್ನು ಶಿಕ್ಷಿಸಲು ನಿನ್ನ ತಮ್ಮಂದಿರನ್ನು ಕಳುಹಿಸು. ತುಂಬ ವಿವೇಕಿಯಾದವನನ್ನು ನಿನ್ನ ಮಂತ್ರಿಯನ್ನಾಗಿ ನೇಮಕ ಮಾಡಿಕೊಂಡು ಅವನ ಬುದ್ಧಿವಾದದಂತೆ ರಾಜಕಾರ್ಯಗಳನ್ನು ನಿರ್ವಹಿಸು. ಬೇಸಾಯಗಾರರಿಗೆ ಹಣದ ದಂಡವನ್ನು ಹಾಕಬೇಡ. ಕುದುರೆಯ ಸೈನ್ಯಕ್ಕೆ ಯೋಗ್ಯವಾದ ಕುದುರೆಗಳನ್ನು ಕೊಡಿಸು. ಇತರ ರಾಜ್ಯಗಳಲ್ಲಿ ನಡೆಯುವ ಚಟುವಟಿಕೆಗಳ ಬಗ್ಗೆ ಎಚ್ಚರಿಕೆಯಿಂದಿರು. ವಿದ್ವಾಂಸರಿಂದ ಪುರಾಣಪ್ರವಚನವನ್ನು ಕೇಳು. ನಿನ್ನ ದೇಶದ ವಿವಿಧ ಭಾಗಗಳಿಗೆ ರಾತ್ರಿಯ ಹೊತ್ತು ವೇಷಮರೆಯಿಸಿಕೊಂಡು ಹೋಗಿ ನಿನಗೆ ಬಂದಿರುವ ವರ್ತಮಾನದ ಸತ್ಯಾಸತ್ಯತೆಯನ್ನು ಪರೀಕ್ಷಿಸು. ಬೇಟೆಯಾಡುವುದನ್ನು ನಿಲ್ಲಿಸಬೇಡ. ಪ್ರತಿನಿತ್ಯವೂ ಬ್ರಾಹ್ಮಣರನ್ನೂ ದೇವತೆಗಳನ್ನೂ ಪೂಜಿಸು. ಇತರರ ಆಸ್ತಿಗಳ ಮೇಲಾಗಲೀ ಹೆಂಡತಿಯರ ಮೇಲಾಗಲಿ ಕಣ್ಣು ಹಾಕಬೇಡ. ಇತರ ದೇಶಗಳ ಗೂಢಚಾರರು ನಿನ್ನ ರಾಜ್ಯಕ್ಕೆ ಪ್ರವೇಶಿಸದಂತೆ ನೋಡಿಕೋ. ಬೇಸಾಯಗಾರರನ್ನು ಹಿಂಸಿಸಬೇಡ. ಗೋವುಗಳಿಗೆ ಸಾಕಾದಷ್ಟು ಗೋವಾಳಗಳನ್ನು ಬಿಡು. ತೀರ್ಥಯಾತ್ರಾ ಕ್ಷೇತ್ರಗಳಲ್ಲಿ ನಿನ್ನಲ್ಲಿರುವ ಅತ್ಯುತ್ತಮ ವಸ್ತುಗಳನ್ನು ದಾನ ಮಾಡು. ನಿನ್ನ ದಂಡ ನಾಯಕರನ್ನು ರಾಜ್ಯದಲ್ಲಿ ಅಗತ್ಯವಾದ ಕಡೆಗಳಲ್ಲಿರುವಂತೆ ನೇಮಿಸು. ಕುದುರೆಗಳಿಗೂ ಆನೆಗಳಿಗೂ ಸಾಕಷ್ಟು ಆಹಾರವನ್ನು ಒದಗಿಸು. ನಿನ್ನ ಗೋವುಗಳನ್ನು ಒಳ್ಳೆಯ ಗೋವಳಿಗರು ಕಾಯುವಂತೆ ಮಾಡು. ವಿದ್ವಾಂಸರಿಗೆ ಮನ್ನಣೆ ಮಾಡು. ಕವಿಗಳ ವಿಚಾರದಲ್ಲಿ ಜಿಪುಣನಾಗಿರಬೇಡ."

ಸರಳದಾಸನಿಗೆ ಜ್ಯೋತಿಷ್ಯದ ವಿಚಾರದಲ್ಲಿ ವಿಶೇಷ ತಿಳುವಳಿಕೆಯಿದ್ದಿರಬೇಕು. ಅವನ ಗ್ರಂಥಗಳಲ್ಲಿ ಅಲ್ಲಲ್ಲಿ ಅದನ್ನು ವ್ಯಕ್ತಪಡಿಸಿದ್ದಾನೆ. ಒಳ್ಳೆಯ ಕುದುರೆಗಳ ಲಕ್ಷಣಗಳೇನು ಎಂಬುದನ್ನು ಹೇಳಿ ಅಶ್ವಗಳಿಗೆ ಬರುವ ರೋಗಗಳ ವಿವರಣೆಯನ್ನು ನೀಡುತ್ತಾನೆ. ಹಾವು ಕಚ್ಚಿದುದನ್ನು ವಾಸಿಮಾಡುವ ಮಂತ್ರಗಳನ್ನು ಹೇಳುವ ಬಗೆಯನ್ನು ನಿರೂಪಿಸುತ್ತಾನೆ. ಅವನ ಕಾಲದ ಮೂಢನಂಬಿಕೆಗಳನ್ನು ಅವನೂ ಹೊಂದಿದ್ದನು. ಅವನ ಮಹಾಭಾರತದ ಅನೇಕ ಕಡೆಗಳಲ್ಲಿ ಇವುಗಳನ್ನು ಅವನು ವರ್ಣಿಸಿದ್ದಾನೆ. ಮಂತ್ರೋಚ್ಚಾರಣೆಯಿಂದಲೂ, ತಾಯಿತಿಗಳಿಂದಲೂ ಸ್ತೋತ್ರ ಪಠನದಿಂದಲೂ ಮಾನವರು ಪವಾಡದ ಶಕ್ತಿಯನ್ನು ಪಡೆಯುವರೆಂದೂ ಅವುಗಳಿಂದ ತಮಗೆ ಬೇಕಾದುದನ್ನು ಸಾಧಿಸಬಹುದೆಂದೂ ಅವನು ನಂಬಿಕೊಂಡಿದ್ದನು. ಅವನ ಮಹಾಭಾರತದಲ್ಲಿ ಆತನ ಕಾಲದ ಸಾಮಾಜಿಕ, ಧಾರ್ಮಿಕ. ಆರ್ಥಿಕ ಚರಿತ್ರೆಯನ್ನು ಪುನಃ ಸೃಷ್ಟಿಸಲು ಅಗತ್ಯವಾದ ಅಂಶ ಅತ್ಯಧಿಕವಾಗಿ ದೊರಕುತ್ತವೆ.

ಮೂಲ ಮಹಾಭಾರತದಿಂದ ಸರಳದಾಸನು ಮಾಡಿಕೊಂಡಿರುವ ಅನೇಕ

ಮಾರ್ಪಾಡುಗಳಲ್ಲಿ ಸ್ವತಂತ್ರ ಬುದ್ಧಿಯಿಂದ ಕಲ್ಪಿಸಿರುವ ಹೊಸ ನಿರ್ಮಿತಿಗಳನ್ನು ದೃಷ್ಟಾಂತಪಡಿಸಲು ಈ ಮುಂದೆ ಒಂದು ಉದಾಹರಣೆಯನ್ನು ಕೊಟ್ಟಿದೆ.

ದುರ್ಯೋಧನನ ಕೊನೆಯ ದಂಡನಾಯಕನಾದ ಶಲ್ಯನು ಬಿದ್ದ ಮೇಲೆ ಮಹಾ ಭಾರತ ಯುದ್ಧವು ಕೊನೆಯಾಯಿತೆಂದೇ ಹೇಳಬೇಕು. ತಮ್ಮಂದಿರನ್ನೂ ಅತಿಶ್ರೇಷ್ಠ ರಾದ ದಂಡನಾಯಕರನ್ನೂ ತನ್ನ ಪಕ್ಷದ ರಾಜರನ್ನೂ ಸೈನ್ಯದ ಬಹುಭಾಗವನ್ನೂ ಬಹು ದಿನ ನಡೆದ ಯುದ್ಧದಲ್ಲಿ ಕಳೆದುಕೊಂಡ ಮಾನಧನನಾದ ದುರ್ಯೋಧನನು ಯುದ್ಧರಂಗದ ಮಧ್ಯದಲ್ಲಿ ರಾಜಗಾಂಭೀರ್ಯವುಳ್ಳ ಆನೆಯೊಂದರ ಮೇಲೆ ಕುಳಿತು ಅಳಿ ದುಳಿದಿದ್ದ ಕೌರವ ಸೈನ್ಯವನ್ನೂ ಭಯಂಕರವಾಗಿ ಕೆಡೆಗಡಿಯುತ್ತಿದ್ದ ಕ್ರೂರಿಗಳಾದ ಪಾಂಡವರನ್ನೂ ಅತಿದುಃಖದಿಂದ ನೋಡುತ್ತಿದ್ದನು. ಈಗ ಯುದ್ಧರಂಗದಿಂದ ಪಲಾ ಯನ ಮಾಡುವುದನ್ನು ಬಿಟ್ಟು ಬೇರಾವ ಮಾರ್ಗವೂ ಅವನಿಗೆ ಕಾಣಲಿಲ್ಲ. ಆದರೆ ಹಾಗೆ ಮಾಡುವುದಕ್ಕೆ ಮುಂಚೆ ತನ್ನ ಒಬ್ಬನೇ ಮಗನಾದ ಲಕ್ಷಣಕುಮಾರನಿಗಾಗಿ ಎಲ್ಲಾ ಕಡೆಯೂ ಉದ್ವೇಗಪೂರ್ಣನಾಗಿ ಹುಡುಕಾಡಿದನು. ಅವನೂ ಯುದ್ಧರಂಗದಲ್ಲಿ ಯುದ್ಧವು ತೀವ್ರವಾಗಿದ್ದ ಕಡೆಯೇ ಇದ್ದನು. ಕೊನೆಗೂ ಅದೃಷ್ಟವಶಾತ್ ಅವನನ್ನು ಕಂಡನು.

ದುಃಖಭಾರದಿಂದ ರಾಜನು ತನ್ನ ಮಗನಿಗೆ ಹೇಳಿದನು "ಕುಮಾರಾ, ಯುದ್ಧ ರಂಗದಿಂದ ಓಡಿಹೋಗಿ ಯಾವುದಾದರೂ ಕಾಡಿನಲ್ಲಿ ಬಚ್ಚಿಟ್ಟುಕೋ." ಕ್ಷತ್ರಿಯ ರಾಜನ ಮಗನಾಗಿ ಹಾಗೆ ಓಡಿಹೋಗಲು ಲಕ್ಷಣ ಕುಮಾರನು ಮೊದಲು ಇಷ್ಟಪಡಲಿಲ್ಲ; ಆದರೆ ಕೊನೆಗೆ ತಂದೆಯ ಬುದ್ಧಿವಾದಕ್ಕೆ ಮಣಿಯಬೇಕಾಯಿತು. ಪಾಂಡವರಂತೂ ಎಲ್ಲ ಕಡೆ ಗಳಿಂದಲೂ ಅಳಿದುಳಿದಿದ್ದ ಕೌರವ ಸೈನ್ಯವನ್ನು ಮುತ್ತುತ್ತಿದ್ದರು. ಆದುದರಿಂದ ಪಲಾಯನ ಮಾಡಲು ಯಾವ ದಾರಿಯೂ ಕಾಣಬರಲಿಲ್ಲ. ಪಾಂಡವರ ಸೈನ್ಯದಿಂದ ಹೊರಹೋಗಲು ಲಕ್ಷಣಕುಮಾರನು ದಾರಿಮಾಡಿಕೊಳ್ಳುತ್ತಿದ್ದಾಗ ಭೀಮನ ಭಯಂಕರ ವಾದ ಗದೆಯ ಹೊಡೆತಕ್ಕೆ ಸಿಕ್ಕಿ ಸತ್ತುಹೋದನು. ಮಗನು ಸತ್ತದ್ದು ತಂದೆಗೆ ಗೊತ್ತಾಗುವಂತಿರಲಿಲ್ಲ.

ಸ್ವಲ್ಪ ಹೊತ್ತಾದ ಮೇಲೆ ದುರ್ಯೋಧನನು ಕುಳಿತಿದ್ದ ಪಟ್ಟದಾನೆಯನ್ನು ಭೀಮನು ಕಂಡು ಅದಕ್ಕೆ ತನ್ನ ಗದೆಯಿಂದ ಜೋರಾಗಿ ಅಪ್ಪಳಿಸಿದನು. ಅದರ ಪರಿ ಣಾಮವಾಗಿ ರಾಜನೊಡನೆ ಅದು ಕೆಳಗುರುಳಿತು. ಆನೆಯ ಕೊರಳಿಗೆ ಕಟ್ಟಿದ್ದ ದೊಡ್ಡ ಗಂಟೆಯ ಕೆಳಗೆ ದುರ್ಯೋಧನನು ಮುಚ್ಚಿಟ್ಟುಕೊಂಡನು. ಹೀಗೆ ಆನೆಯ ದೇಹದ ಕೆಳಗೆ ಅವನು ಮರೆಯಾಗಿ ಉಳಿದನು. ಭೀಮನು ಅವನನ್ನು ಹುಡುಕಲು ಮಾಡಿದ ಪ್ರಯತ್ನವು ಫಲಕಾರಿಯಾಗಲಿಲ್ಲ.

ರಾತ್ರಿ ಬಂತು; ಕಗ್ಗತ್ತಲಾಯಿತು. ದಿವಸದ ಯುದ್ಧ ಮುಗಿಯಿತು, ಯುದ್ಧ ರಂಗವು ಒಂದು ಕ್ಷಣ ನಿಶ್ಶಬ್ದವಾಯಿತು. ಈ ಮೌನವು ಹೆಚ್ಚು ಕಾಲ ಹಾಗೇ ಇರಲಿಲ್ಲ.

ಸಾವಿರಾರು "ಯೋಗ್ನಿ"*ಗಳು ಹೆಣಗಳನ್ನು ಬಗೆದು, ರಕ್ತವನ್ನು ಕುಡಿದು, ಮಾಂಸವನ್ನು ತಿಂದು, ಹಲ್ಲಿನಲ್ಲಿ ಸಶಬ್ದವಾಗಿ ಮೂಳೆಗಳನ್ನು ಮುರಿದು ಅವಕ್ಕೆ ಸಂತೋಷಕರವಾದ ರೀತಿಯಲ್ಲಿ ನಲಿದು ನರ್ತನ ಮಾಡಿದುವು. ರಾತ್ರಿಯು ಮಧ್ಯರಾತ್ರಿಯನ್ನು ಮೀರಿರಬೇಕೆಂದು ದುರ್ಯೋಧನನು ತಿಳಿದು ಓಡಿಹೋಗಿ ಪ್ರಾಣವನ್ನು ಉಳಿಸಿಕೊಳ್ಳಲು ಕೊನೆಯ ಪ್ರಯತ್ನವನ್ನು ಮಾಡಬೇಕೆಂದು ನಿರ್ಧರಿಸಿದನು. ಸತ್ತು ಬಿದ್ದಿದ್ದ ಆನೆಯ ದೊಡ್ಡ ದೇಹದ ಕೆಳಗಿನಿಂದ ತೆವಳಿಕೊಂಡು ಹೊರಗೆ ಬಂದರೆ ಎದುರಿನಲ್ಲಿ ರಕ್ತದ ನದಿ ಆಳವಾಗಿ ವಿಸ್ತಾರವಾಗಿ ಹರಿಯುತ್ತಿತ್ತು. ರಥಗಳು ಹಡಗಿನಂತೆ ತೇಲುತ್ತಿದ್ದುವು; ಸತ್ತ ಆನೆಗಳೂ ಕುದುರೆಗಳೂ ದೋಣಿಗಳಂತೆ ಕಂಡವು: ಹೆಣಗಳು ತೆಪ್ಪಗಳಂತೆ ತೋರಿದುವು. ಸ್ವಲ್ಪ ಹೊತ್ತು ಅವನು ದಿಗ್ಭ್ರಮೆಗೊಂಡು ನಿಂತನು. ಆ ಬಳಿಕ ತೇಲುತ್ತಿರುವ ಹೆಣವೊಂದನ್ನು ತೆಪ್ಪವನ್ನಾಗಿ ಮಾಡಿಕೊಂಡು ರಕ್ತ ಪ್ರವಾಹದ ಎದುರು ದಡಕ್ಕೆ ಹೋಗಲು ಯೋಚಿಸಿದನು. ತನ್ನ ಶೂರ ಸಹೋದರನಾದ ದುಶ್ಶಾಸನ, ಪರಮ ಮಿತ್ರನೂ ದಂಡನಾಯಕನೂ ಆದ ಕರ್ಣ, ಆಚಾರ್ಯ ದ್ರೋಣ, ನೆಚ್ಚಿನ ಮಂತ್ರಿ ಶಕುನಿ-ಇವರೆಲ್ಲರ ಹೆಣಗಳು ಒಂದಾದ ಮೇಲೊಂದು ತೇಲಿಬಂದುವು. ಪ್ರತಿಯೊಬ್ಬರನ್ನೂ ಕುರಿತು ಅವನು ತನ್ನ ದುಃಖವನ್ನು ತೋಡಿಕೊಂಡನು; ಅವರೆಲ್ಲರ ಪರಾಕ್ರಮವನ್ನೂ ಗುಣಗಣಗಳನ್ನು ವಿವರಿಸಿದನು. ಅವರಲ್ಲಿ ಪ್ರತಿಯೊಬ್ಬರ ಹೆಣವನ್ನೂ ತೆಪ್ಪವನ್ನಾಗಿ ಮಾಡಿಕೊಳ್ಳಲು ಪ್ರಯತ್ನಪಟ್ಟನು. ಆದರೆ ಅವನ ದೇಹದ ಮತ್ತು ಗದೆಯ ಭಾರವನ್ನು ಅವು ಯಾವುವು ಹೊರಲಾರದೆ ಹೋದುವು. ಆದುದರಿಂದ ತಾನು ಪ್ರತಿಯೊಂದು ಸಲವೂ ಆಚೆಯ ದಡಕ್ಕೆ ಹೋಗಲು ಪ್ರಯತ್ನಪಟ್ಟಾಗ ಅವನು ರಕ್ತ ಪ್ರವಾಹದಲ್ಲಿ ಮುಳುಗುತ್ತಿದ್ದನು. ಕೊನೆಗೆ ಚಿಕ್ಕಪ್ರಾಯದ ತೆಳುವಾದ ಒಂದು ದೇಹ ಬರುವುದು ಕಾಣಿಸಿತು. ಅದು ಸಾಲಂಕೃತವಾಗಿತ್ತು, ಹೊಳೆಯುವ ಕಂಕಣಗಳು, ಥಳ ಥಳಿಸುವ ಕರ್ಣಕುಂಡಲಗಳು. ಅದು ಹರಿಯುವ ರಕ್ತ ಪ್ರವಾಹದಲ್ಲಿ ಮೂಡುವ ಸೂರ್ಯನಂತೆ ತೇಲಿಬರುತ್ತಿತ್ತು. "ಸುಂದರ ಯುವಕನೇ ನೀನಾರು? ಈ ರಕ್ತ ಪ್ರವಾಹದ ಆಚೆಯ ದಡಕ್ಕೆ ನನ್ನನ್ನು ಸಾಗಿಸ ಬಲ್ಲೆಯಾ?" ಎಂದು ದುರ್ಯೋಧನನು ಗಟ್ಟಿಯಾಗಿ ಹೇಳಿ ತನ್ನ ದಪ್ಪ ಗದೆಯೊಡನೆ ಅದರ ಮೇಲೆ ಕುಳಿತನು. ಆ ಹೆಣವು ಸಣ್ಣ ದೋಣಿಯಂತೆ ತೇಲಿತು. ಗದೆಗಳನ್ನೇ ಹುಟ್ಟುಗಳನ್ನಾಗಿ ಮಾಡಿಕೊಂಡು ದೊರೆಯು ರಕ್ತ ಪ್ರವಾಹದ ಮತ್ತೊಂದು ದಡವನ್ನು ಮುಟ್ಟಿದನು. ಅವನು ಕ್ಷೇಮವಾಗಿ ನೆಲೆ ನಿಂತ ಮೇಲೆ ತನಗೆ ಇಷ್ಟು ಸಹಾಯ ಮಾಡಿದ ಹೆಣವು ಯಾರದಿರಬಹುದೆಂದು ಗುರುತು ಹಿಡಿಯಲು ಮುಖದ ಕಡೆ ನೋಡಿದನು. ಅಯ್ಯೋ ಪಾಪ! ಅದು ತನ್ನ ಒಬ್ಬನೇ

---

* ಯೋಗ್ನಿಗಳು ಅರ್ಧದೇವಾಂಶದಿಂದ ಕೂಡಿದ ಭಯಂಕರಾಕಾರದ ಅಗಾಧ ಸಾಮರ್ಥ್ಯದ ಸ್ತ್ರೀ ರೂಪಗಳೆಂದು ಕವಿ ಕಲ್ಪನೆ. ಅವುಗಳಿಗೆ ಮಾನವ ರಕ್ತ ಮಾಂಸಗಳ ಮೇಲೆ ತುಂಬ ಆಸೆ.

ಮಗನಾದ ಲಕ್ಷಣಕುಮಾರನ ಶವವಾಗಿತ್ತು. ತಂದೆಯ ಹೃದಯ ಒಡೆದು ಚೂರಾಯಿತು. ಸ್ವಲ್ಪ ಹೊತ್ತಿನಲ್ಲಿ ಅವನು ಮೂರ್ಛೆ ಹೋದನು. ಎಚ್ಚೆತ್ತ ಮೇಲೆ ಅವನ ಅನೇಕ ಗುಣಗಳನ್ನು ವರ್ಣಿಸಿ ಗಟ್ಟಿಯಾಗಿ ಅತ್ತನು. ಆದರೆ ಇನ್ನು ಕಳೆಯಲು ಹೆಚ್ಚು ಹೊತ್ತಿರಲಿಲ್ಲ. ಅವನು ಬೇಗ ತನ್ನ ಗದೆಯಿಂದಲೇ ಒಂದು ಗುಳಿಯನ್ನು ತೋಡಿ, ಅದರಲ್ಲಿ ತನ್ನ ಪ್ರಿಯ ಪುತ್ರನ ದೇಹವನ್ನು ಹುದುಗಿಟ್ಟು ತನ್ನ ರಾಣಿಯಾದ ಭಾನುಮತಿಯು ನಿದ್ರೆಗೆಟ್ಟು ಕಾಯುತ್ತಿದ್ದ ತನ್ನ ಅರಮನೆಗೆ ಓಡಿದನು.

ಮಿಕ್ಕ ಕಥೆಯಲ್ಲಿ ಅದೇ ರಾತ್ರಿ ದುರ್ಯೋಧನನು ವ್ಯಾಸ ಸರೋವರಕ್ಕೆ ಹೋದುದು, ಕೊನೆಗೆ ಅಲ್ಲಿ ಭೀಮನೊಡನೆ ಯುದ್ಧ ಮಾಡಿ ಪ್ರಾಣಬಿಟ್ಟುದು-ಇವುಗಳಿಗೆ ಮೀಸಲಾಗಿದೆ. ಈ ಮೇಲೆ ಹೇಳಿರುವ ಅತಿ ಸಂಗ್ರಹವಾದ ಮಾರ್ಪಾಟಿನಂಥವು ಸರಳ ಮಹಾಭಾರತದಲ್ಲಿ ಅನೇಕವಿವೆ, ಪ್ರತಿಯೊಂದು ಬೇರೆಯ ವಿಧವಾದ ರೀತಿಯಲ್ಲಿ ಚಿತ್ರಿಸಲ್ಪಟ್ಟಿದೆ.

## ಸಂದರ್ಭಗಳು

1. ಜಾನ್‌ಬ್ರಿಗ್ : ಹಿಸ್ಟರಿ ಆಫ್ ದಿ ರೈಸ್ ಆಫ್ ಮೊಹಮ್ಮದನ್ ಪವರ್ ಇನ್ ಇಂಡಿಯ, ಸಂಪುಟ II, ಲಂಡನ್ 1829, ಪುಟಗಳು 284-85

2. ಕೇಂಬ್ರಿಜ್ ಹಿಸ್ಟರಿ ಆಫ್ ಇಂಡಿಯ, ಸಂಪುಟ III, ಪುಟಗಳು 391-92; ವಿ.ಡಿ. ಮಹಾಜನ್—ಮುಸ್ಲಿಮ್ ರೂಲ್ ಇನ್ ಇಂಡಿಯ, ಪುಟಗಳು 246-47.

# 4. ಕವಿಯ ಮಹಾಭಾರತ: ಅದರಲ್ಲಿ ಬರುವ ಭೌಗೋಳಿಕ ಮತ್ತು ಚಾರಿತ್ರಿಕ ವಿಷಯಗಳು

ಸರಳ ಮಹಾಭಾರತದಲ್ಲಿ ಕಂಡುಬರುವ ಆದರೆ ಸಂಸ್ಕೃತ ಮೂಲ ಮಹಾಭಾರತದಲ್ಲಿ ಕಾಣದಿರುವ ಅನೇಕ ಭೌಗೋಳಿಕ ಮತ್ತು ಚಾರಿತ್ರಿಕ ವಿಷಯಗಳ ಬಗ್ಗೆ ಓದುಗರಿಗೆ ಒಟ್ಟಾರೆಯಾಗಿ ಒಂದು ಭಾವನೆಯನ್ನು ಕೊಡ ಬಯಸುತ್ತೇವೆ. ಸರಳದಾಸನು ತನ್ನ ಎಲ್ಲ ಉಪಾಖ್ಯಾನಗಳಲ್ಲಿಯೂ ಅದರಲ್ಲಿಯೂ, ಭಾನುಮತಿ, ದ್ರೌಪದಿ, ಉತ್ತರೆ ಮುಂತಾದವರ ವಿವಾಹಕ್ಕೆ ಸಂಬಂಧಿಸಿದ ಉಪಾಖ್ಯಾನಗಳಲ್ಲಿ ಭಾರತದ ಎಲ್ಲ ಕಡೆಯ ರಾಜರು ಬಂದಿದ್ದರೆನ್ನುವಾಗ ಸಾಮಾನ್ಯವಾಗಿ ಅತ್ಯಧಿಕ ಸಂಖ್ಯೆಯಲ್ಲಿ ಭೌಗೋಳಿಕವಾದ ಮತ್ತು ಚಾರಿತ್ರಿಕವಾದ ಅಂಕಿತ ನಾಮಗಳನ್ನು ಸೇರಿಸುತ್ತಾನೆ. ಅವನ ಸಭಾ ಪರ್ವದಲ್ಲಿ ಅವನಿಗೆ ಗೊತ್ತಿದ್ದ ಭಾರತದ ಚಾರಿತ್ರಿಕ ಮತ್ತು ಭೌಗೋಳಿಕ ಚಿತ್ರವನ್ನು ಕೊಡುತ್ತಾನೆ. ಆ ಪರ್ವದ ಹದಿಮೂರು ಸಾವಿರ ಪದ್ಯಗಳಲ್ಲಿ ಪಾಂಡವರ ದಿಗ್ವಿಜಯವನ್ನು ವರ್ಣಿಸುವ ಸಂದರ್ಭದಲ್ಲಿ ಅವರನ್ನು ಭಾರತದ ಎಲ್ಲ ಕಡೆಗಳಿಗೂ ಕರೆದೊಯ್ಯುತ್ತಾನೆ. ಪಾಂಡವರು ಅಜ್ಞಾತವಾಸದಲ್ಲಿದ್ದಾಗ ಅವರನ್ನು ಹುಡುಕಿಕೊಂಡು ಬರಲು ದುರ್ಯೋಧನನು ಭಾರತದ ನಾಲ್ಕು ದಿಕ್ಕುಗಳಿಗೂ ಕಳುಹಿಸಿದ ವಾರ್ತಾವಾಹಕರು, ತಾವು ಪಾಂಡವರಿಗಾಗಿ ಹುಡುಕಾಡಿದ ಪ್ರದೇಶಗಳ ದೀರ್ಘವಾದ ಪಟ್ಟಿಯೊಂದನ್ನು ನೀಡುತ್ತಾರೆ. ಉದ್ಯೋಗಪರ್ವದಲ್ಲಿ ಮಹಾಭಾರತ ಯುದ್ಧದಲ್ಲಿ ಭಾಗವಹಿಸಿದ ದೇಶಗಳನ್ನೂ ಅವುಗಳ ರಾಜರನ್ನೂ ಹೆಸರಿಸುತ್ತಾನೆ. ಅಶ್ವಮೇಧ ಪರ್ವದಲ್ಲಿ ಪವಿತ್ರವಾದ ಯಜ್ಞಾಶ್ವವು ಭಾರತದ ಬೇರೆ ಬೇರೆ ಕಡೆಗಳಿಗೆ ಹೋಗುತ್ತದೆ; ಆ ಎಲ್ಲ ಕಡೆಗಳ ಹೆಸರುಗಳೂ ಹೇಳಲ್ಪಟ್ಟಿವೆ.

ಹೀಗೆ ಸರಳ ಮಹಾಭಾರತದಿಂದ ಭಾರತದ ಭೌಗೋಳಿಕ ಚಾರಿತ್ರಿಕ ಚಿತ್ರವೊಂದು ದೊರಕುತ್ತದೆ. ಇದರ ಮುಖ್ಯ ವೈಚಿತ್ರ್ಯವೇನೆಂದರೆ ಮಹಾಭಾರತ ಕಾಲದ ಚಿತ್ರ ನಮಗೆ ದೊರಕುವುದಿಲ್ಲ; ಅದಕ್ಕೆ ಬದಲಾಗಿ, ಕವಿಯು ಜೀವಿಸಿದ್ದ ಚಾರಿತ್ರಿಕ ಕಾಲದ ಚಿತ್ರ ದೊರೆಯುತ್ತದೆ. ಆದರೆ ಸರಳದಾಸನು ನಮಗೆ ಬಿಟ್ಟಿರುವ ಭೌಗೋಳಿಕ ಮತ್ತು ಚಾರಿತ್ರಿಕ ವಿಷಯ ಸಂಗ್ರಹದ ಇತಿಮಿತಿಗಳನ್ನು ಗಮನಿಸಬೇಕು. ಅವನ ಮಹಾಭಾರತದ ಎಲ್ಲ ಪರ್ವಗಳಲ್ಲಿಯೂ ಈ ವಿಷಯವು ಪ್ರಾಸಂಗಿಕವಾಗಿಯೂ ಅಪ್ರಧಾನವಾಗಿಯೂ ಬರುತ್ತದೆ. ಆದರೆ ಸಭಾಪರ್ವದಲ್ಲಿ ಮಾತ್ರ ಆ ಚಾರಿತ್ರಿಕ ಕಾಲದ ಭಾರತದ ಭೌಗೋಳಿಕ ಚಿತ್ರವನ್ನು ಅಭಿಪ್ರಾಯ ಪೂರ್ವಕವಾಗಿ ಸೇರಿಸಿರುವಂತೆ ಕಾಣಬರುತ್ತದೆ. ಭೂಗೋಳವನ್ನಾಗಲೀ ಚರಿತ್ರೆಯನ್ನಾಗಲೀ ನೇರವಾಗಿಯೂ ವ್ಯವಸ್ಥಿತವಾಗಿಯೂ ಬರೆಯುವ ಕಲೆಯು ಪ್ರಾಚೀನ ಭಾರತದ ಸಾಧನೆಗಳಲ್ಲಿ ಒಂದಲ್ಲವೆಂದು ನಮಗೆ ತಿಳಿದಿರುವಾಗ ಅವನ

ಕಾಲದ ಭಾವನೆಗಳನ್ನು ನಮ್ಮ ಕವಿ ಮೀರಿದನೆಂದು ನಿರೀಕ್ಷಿಸುವುದು ತಪ್ಪಾದೀತಂ. ಮಹಾಭಾರತ ಯುದ್ಧಗಳು ಎಪ್ಪತ್ತಮೂರು ಸಲ ನಡೆದುವೆಂದು ಅವನು ಸ್ಪಷ್ಟವಾಗಿ ಹೇಳಿರುವ ಅಭಿಪ್ರಾಯವಾದುದರಿಂದ ತನ್ನ ಮಹಾಭಾರತದಲ್ಲಿ ತನಗೆ ಗೊತ್ತಿದ್ದ ಎಲ್ಲ ಕಾಲಗಳ ಭೌಗೋಳಿಕ ಮತ್ತು ಚಾರಿತ್ರಕ ವಿಷಯಗಳನ್ನೂ ಒಂದೇ ಬಗೆಯಾಗಿ ಸೇರಿಸಿದ್ದಾನೆ. ಅವನು ಹೇಳಿರುವ ಭೌಗೋಳಿಕ ಪ್ರದೇಶಗಳಲ್ಲಿ ಕೆಲವು ಕಲ್ಪಿತವಾಗಿರಬಹುದು; ಆದರೆ ಅವುಗಳಲ್ಲಿ ಬಹು ಪಾಲನ್ನು ಗುರುತಿಸಬಹುದು. ಅವನು ಹೇಳಿರುವ ಕೆಲವು ಭೌಗೋಳಿಕ ಮತ್ತು ಚಾರಿತ್ರಕ ಹೆಸರುಗಳಿಗೆ ಪೌರಾಣಿಕ ಸ್ವರೂಪವನ್ನು ಕೊಡುವ ಉದ್ದೇಶದಿಂದ ವ್ಯತ್ಯಾಸ ಮಾಡಿರಬಹುದು. ಕೆಲವು ಕಡೆ ಒರಿಯಾ ಭಾಷೆಯಲ್ಲಿ ಉಪಯೋಗಿಸುವ ಸ್ವರೂಪದಲ್ಲಿ ಕಂಡುಬರಬಹುದು. ಅವನು ನೀಡಿರುವ ಭೌಗೋಳಿಕ ಅಂಕಿತನಾಮಗಳಲ್ಲಿ ನೆರೆಹೊರೆಯ ದೇಶಗಳು ಸಾಲಾಗಿ ಬರದಿರಬಹುದು. ಅವುಗಳ ಬಗ್ಗೆ ಸೂಚಿಸಿರುವ ದಿಕ್ಕುಗಳು ಕೂಡ ತಪ್ಪಾಗಿರಬಹುದು. ಅವನ ಕಾಲದಲ್ಲಿ ಯಾವ ಭೂಪಟಗಳೂ ಇರಲಿಲ್ಲವಾದುದರಿಂದ ಸರಳದಾಸನು ಅಂಥ ಯಾವ ಸಾಧನವನ್ನೂ ಉಪಯೋಗಿಸಿರುವ ಸಾಧ್ಯತೆಯಿಲ್ಲ. ಅವನು ಕೇಳಿದ್ದ, ಅವನಿಗೆ ನೆನಪಿಗೆ ಬಂದ ಕೆಲವು ಭೌಗೋಳಿಕ ಮತ್ತು ಚಾರಿತ್ರಕ ಹೆಸರುಗಳನ್ನು ಕಾವ್ಯ ಬರೆಯುವಾಗ ಛಂದೋಬಂಧಕ್ಕೆ ಹೊಂದಿಕೊಳ್ಳುವಂತೆ ಸಮಯಾನುಸಂದರ್ಭ ಸೇರಿಸಿರಬಹುದು. ಛಂದಸ್ಸಿನ ನಿಯಮಗಳಿಗೆ ಹೊಂದಿಕೊಳ್ಳುವಂತೆ ಕೆಲವು ಹೆಸರುಗಳನ್ನು ದೀರ್ಘವಾಗಿ ಮಾಡಿರಬಹುದು ಅಥವಾ ಹ್ರಸ್ವಗೊಳಿಸಿರಬಹುದು. ಇದೇ ನಿಯಮಗಳಿಗೆ ಅನುಸಾರವಾಗಿ ಭೌಗೋಳಿಕ ಪ್ರದೇಶಗಳನ್ನು ಮತ್ತು ಸ್ಥಳಗಳನ್ನು ಹೇಳುವಾಗ ಅವುಗಳ ನೆರೆಹೊರೆಯ ಹೊಂದಾಣಿಕೆಯನ್ನು ತಲೆಕೆಳಗು ಮಾಡಿರಬಹುದು.

ಈ ಎಲ್ಲ ಇತಿಮಿತಿಗಳಿದ್ದರೂ ಸರಳದಾಸನ ಚಾರಿತ್ರಕ ಮತ್ತು ಭೌಗೋಳಿಕ ಜ್ಞಾನವು ಎಲ್ಲ ಓದುಗರಿಗೂ ಬಹುಮುಖ್ಯವಾದ ವಿಷಯ ಸಂಗ್ರಹ ಮೂಲಗಳಾಗಿ ಪರಿಣಮಿಸಿವೆ. ಮಹಾಭಾರತ ಯುದ್ಧದಲ್ಲಿ ಭಾಗವಹಿಸಿದ ಪ್ರತಿಯೊಂದು ರಾಜ್ಯದ ವಿವರಣೆ ನೀಡಿದ ಮೇಲೆ ಒಟ್ಟು ಭಾರತವನ್ನೆಲ್ಲ ಒಳಗೊಳ್ಳುವ ರಾಜ್ಯದ ಹೆಸರುಗಳನ್ನು ಪಟ್ಟಿಮಾಡಿ ಹೇಳುತ್ತಾನೆ. ಮಹಾಭಾರತ ಕಾಲದ ರಾಜ್ಯಗಳಾದ ಸಿಂಧೂ, ಗಾಂಧಾರ ಮುಂತಾದುವುಗಳ ಜೊತೆಗೆ ಚಾರಿತ್ರಕ ರಾಜ್ಯಗಳಾದ ಗರ್ಜನ (ಘಜ್ನಿ), ತಿಹುಡಿ (ಗರ್ಹ್ವಾಲದ ತೆಹರಿ) ಮತ್ತು ಕರಮಂಡಲ (ಚೋಳಮಂಡಲ) ಮುಂತಾದವುಗಳನ್ನು ಸೇರಿಸುತ್ತಾನೆ. ಹೀಗೆ ಪೌರಾಣಿಕ ಮತ್ತು ಚಾರಿತ್ರಕವಾದ ಭೌಗೋಳಿಕ ಹೆಸರುಗಳು ಮಿಶ್ರಣಗೊಂಡಿವೆ.

ಭಾರತದ ಬೇರೆ ಬೇರೆ ಪ್ರದೇಶಗಳ ವಿವರವಾದ ಭೌಗೋಳಿಕ ವಿಚಾರ ನಿರೂಪಣವಲ್ಲಿಯೂ ಇದೇ ವೈಚಿತ್ರ್ಯವನ್ನು ನಾವು ಕಾಣಬಹುದು. ಭಾರತದ ವಾಯುವ್ಯದ ಭೌಗೋಳಿಕ ವಿಚಾರವಲ್ಲಿ ಸರಳದಾಸನಿಗೆ ಸ್ಪಷ್ಟವಾದ ತಿಳಿವಳಿಕೆಯಿರಲಿಲ್ಲ. ಆದರೂ

ಲಾಹೋರ್ (ಲೋಹಪುರ) ಪಂಜಾಬ್, ಹರಿಯಾಣ ಮುಂತಾದುವುಗಳನ್ನು ಹೆಸರಿಸುತ್ತಾನೆ. ಅವನ ಭೌಗೋಳಿಕ ಜ್ಞಾನವು ಭಾರತದ ವಾಯುವ್ಯ ಪ್ರಾಂತದ ಆಚೆಯ ರಾಜ್ಯಗಳವರೆಗೂ ಹಬ್ಬಿದ್ದಿತು, ಏಕೆಂದರೆ ಅವನು ಘಜನ, ಖುರ್‌ಸ್ತಾನ್, ಪರ್ಷಿಯಾ ಮುಂತಾದ ಹೆಸರುಗಳನ್ನು ಹೇಳುತ್ತಾನೆ. ಮಧ್ಯಭಾರತದ ಭೌಗೋಳಿಕ ಹೆಸರುಗಳಾದ ಅಜಯಮೇರು (ಅಜ್ಮೀರ್), ರಣಸ್ತಂಭಪುರ (ರಾಣ್‌ಥಾಂಭೋರ್) ಅಂಬರ್, ಜೋಧಪುರ, ಕಲಿಂಜರ್ (ಕುಂಜರ), ಚಾಂದೇರಿ, ಭೂಪಾಲ್, ಸಿಯಾಪುರ, ಉಜ್ಜೈನಿ ಮುಂತಾದುವು ಹೇಳಲ್ಪಟ್ಟಿವೆ. ಭಾರತದ ಪಶ್ಚಿಮಭಾಗದ ನಾಸಿಕ್‌ಜಿಲ್ಲೆಯ ಬಗ್ಲನ ಮತ್ತು ಭೃಗುಕಚ್ಛ (ಭೃಗುಪುರ) (ಈಗ ಇದು ಗುಜರಾತಿನಲ್ಲಿರುವ ಬ್ರೋಚ್)-ಇವುಗಳನ್ನೂ ಹೇಳಿದ್ದಾನೆ.

ಈಗ ಉತ್ತರ ಪ್ರದೇಶವೆಂದು ಕರೆಯುವ ಭಾಗದ ಪವಿತ್ರ ನಗರಗಳನ್ನು ಹೇಳಲೇಬೇಕಾದುವರಿಂದ ಹೇಳಿದ್ದಾನೆ. ಆದರೆ ಅವುಗಳ ಜೊತೆಯಲ್ಲಿ ಸಾಂಪ್ರದಾಯಕವಾಗಿ ಪವಿತ್ರವೆಂದು ಅಷ್ಟು ಪ್ರಸಿದ್ಧವಲ್ಲದ ಊರಿನ ಹೆಸರುಗಳೂ ಬರುತ್ತವೆ. ಜಾನ್ ಜಿಲ್ಲೆಯ ಕಲ್ಪಿ, ಕಲಾನಗರ (ಅಲಹಾಬಾದಿನ ಹತ್ತಿರದ ಕರ) ಶುಕ್ಲಪುರ (ವಾರಣಾಸಿಯ ಚಾಂಪೌಲಿ ತಹಸೀಲಿನ ಸಕಲ್ದಿ) ಮತ್ತು ಜಾನ್‌ಪುರ ಇವುಗಳು ಹೇಳಲ್ಪಟ್ಟಿವೆ. ಸರಳ ಮಹಾಭಾರತದಲ್ಲಿ ಎರಡು ದೀರ್ಘ ಉಪಾಖ್ಯಾನಗಳಲ್ಲಿ ಕಲ್ಪನೆಗೆ ಸಂಬಂಧಿಸಿದ ಯುದ್ಧಗಳ ವರ್ಣನೆ ಬಂದಿದೆ. ಮಹಮ್ಮದ್‌ತೊಗಲಖನು ಸತ್ತಮೇಲೆ ದೆಹಲಿಯ ಸುಲ್ತಾನೀ ರಾಜ್ಯವು ವಿಭಾಗವಾಗಿ ಹೋದಾಗ, ದೆಹಲಿ, ಮಾಲ್ವ, ಜಾನ್‌ಪುರ ಇವುಗಳ ಸುಲ್ತಾನರ ನಡುವೆ ಕಲ್ಪಿಯು ಕಲಹಕ್ಕೆ ಕಾರಣವಾದ ಸಣ್ಣ ಸ್ವತಂತ್ರ ರಾಜ್ಯವಾಯಿತು. ಈ ರಾಜ್ಯದ ಹಕ್ಕಿಗಾಗಿ ನಡೆದ ಮುಮ್ಮುಖವಾದ ಕದನದಲ್ಲಿ ನಡೆದ ವಿಷಯಗಳನ್ನು ಸರಳದಾಸನು ತನ್ನ ಉಪಾಖ್ಯಾನಗಳಲ್ಲಿ ಸೇರಿಸಿದ್ದಾನೆ. ಆದರೆ ಸುಲ್ತಾನರ ಹೆಸರುಗಳನ್ನು ಬದಲಾಯಿಸಿ ರಾಜ್ಯದ ಹೆಸರುಗಳನ್ನು ಸರಿಯಾಗಿ ಇರಿಸಿಕೊಂಡು ಪೌರಾಣಿಕ ಹಿನ್ನೆಲೆಯನ್ನು ಸೃಷ್ಟಿಸಿ ಕಥೆ ಹೇಳಿದ್ದಾನೆ. ಇದೇ ರೀತಿಯಲ್ಲಿ, ಸಭಾಪರ್ವದಲ್ಲಿ ಒರಿಸ್ಸಾ ಮತ್ತು ಜಾನ್‌ಪುರಗಳ ನಡುವೆ ನಡೆದ ಯುದ್ಧವನ್ನು ನೆನಪಿಗೆ ತರುವ ದೀರ್ಘವಾದ ಉಪಾಖ್ಯಾನವನ್ನು ಬರೆದಿದ್ದಾನೆ. ಅದರಲ್ಲಿ ಯಮುನಾಪುರ ಅಥವಾ ಯಮದಗ್ನಿಪುರ ಎಂಬ ಹೆಸರನ್ನು ಉಪಯೋಗಿಸಿದ್ದಾನೆ.

ಬಿಹಾರ ಮತ್ತು ಬಂಗಾಳ ಪ್ರದೇಶಗಳಲ್ಲಿ ಮಗಧ, ಮಿಥಿಲ, ಭೋಜಪುರ, ಅಂಗ (ಕರ್ಣಮಂಡಲ), ಕಿರಭುಕ್ತಿ, ನರೇಂದ್ರಿ (ನೀಲೇಂದ್ರಿ), ಪೂರ್ವಬಂಗಾಳ (ವಂಗ್ರದೇಶ) ಎಂಬ ಹೆಸರುಗಳು ಹೇಳಲ್ಪಟ್ಟಿವೆ. ಈ ಪ್ರದೇಶದ ಇತರ ಕೆಲವು ನಗರಗಳ ಹೆಸರುಗಳನ್ನೂ ಸರಳದಾಸನು ಹೇಳಿದ್ದಾನೆ; ಉದಂಡಪುರ (ಬಿಹಾರ್-ಶರೀಫ್) ವೈಶಾಲಿ (ವೃಷಲನಗರ); ಚಿಂತಾಪುರ (ಅಂಗದ ರಾಜಧಾನಿ ಅಂದರೆ ಈಗಿನ ಭಾಗಲ್ಪುರ ಮತ್ತು ಮಾಂಘೀರ್ ಪ್ರದೇಶ) ; ವೇಲಾವಲಿಪುರ (ಅಂದರೆ ಗೌರ್ ಬಲ್ಲಾಳ ಸೇನನ ರಾಜಧಾನಿ);

ಗಂಗಾನದಿಯ ದಡದಲ್ಲಿನ ಜ್ಞಾನಪುರ (ದೊರೆ ಜ್ಞಾನಚಂದ್ರನ ಮತ್ತು ಕುಲಚಂದ್ರನ ರಾಜಧಾನಿ ಎಂದು ಕವಿ ಹೇಳಿದ್ದಾನೆ); ಹರಿಕಾಲ ನಗರ, ಇದು ಬಹುಶಃ ರಣದಂಕಮಲ್ಲ ಘರಿಕಾಲ ದೇವನ ರಾಜಧಾನಿಯಾದ ಪಟ್ಟಿಕೇರ ಇರಬಹುದು; ದಂಡಪುರ, ಬಹುಶಃ ದಂಡಕ ಭುಕ್ತಿಯ ರಾಜಧಾನಿ ಅಥವಾ ಈಗಿನ ಮಿಡ್ನಾಪುರ.

ಅಸ್ಸಾಮಿನ ಪ್ರಾಚೀನ ರಾಜಕೀಯ ವಿಭಾಗಗಳಾದ ಕಾಮರೂಪ, ಪ್ರಾಗ್ಜ್ಯೋತಿಷ ಪುರ,ಶೋಣಿತಪುರ, ಕಾಮಾಕ್ಷ್ಯ ಅಲ್ಲದೆ ಮಧ್ಯಕಾಲೀನ ರಾಜ್ಯಗಳಾದ,ಲಕ್ಷ್ಮೀಪುರ ಅಥವಾ ಲಖೀಪುರ (ಇದು ಬ್ರಹ್ಮಪುತ್ರಾ ನದಿಯ ಸಮತಲ ಪ್ರದೇಶದಲ್ಲಿದ್ದು ಹದಿಮೂರನೆಯ ಶತಮಾನದಲ್ಲಿ ಚೂತಿಯಾಗಳೆಂದು ಹೆಸರಿದ್ದ ಮೂಲ ವಾಸಿಗಳಿಂದ ಆಳಲ್ಪಡುತ್ತಿತ್ತು). ಇದಕ್ಕೆ ಅಂಟಿಕೊಂಡಂತಿರುವ ಹಿಮಾಲಯ ಪ್ರದೇಶದಲ್ಲಿ ನೇಪಾಲ, ಭೂತಾನ, ಪಶು ಪಾಲಕ (ಬಹುಶಃ ಸಿಕ್ಕಿಂ) ಖಗದೇಶ, (ಪಕ್ಷಿಗಳ ದೇಶ) ಮಹಾತೃಣ ದೇಶ (ಎತ್ತರವಾಗಿ ಹುಲ್ಲು ಬೆಳೆಯುವ ಪ್ರದೇಶ), ಮಹ್ಲಾರ ದೇಶ (ಅಂದರೆ ಅಲೆಮಾರಿ ಜನಗಳ ದೇಶ) ಮತ್ತು ಜಲತರಂಗ ದೇಶ (ಅಂದರೆ ಹೆಚ್ಚು ಮಳೆ ಬೀಳುವ ದೇಶ) ಮುಂತಾದುವುಗಳನ್ನು ಸೇರಿಸಿದ್ದಾನೆ.

ಸರಳದಾಸನು ಒರಿಸ್ಸಾ ಪ್ರಾಂತಕ್ಕೆ ಸೇರಿದವನಾದುದರಿಂದ ಈ ಪ್ರದೇಶಕ್ಕೆ ಸಂಬಂಧಿಸಿದ ಭೌಗೋಳಿಕ ಪ್ರದೇಶಗಳನ್ನು ಅವನು ಅಧಿಕ ಸಂಖ್ಯೆಯಲ್ಲಿ ಹೇಳಿರುವುದು ಸ್ವಾಭಾವಿಕವೇ. ಏಕಾಮ್ರ (ಭುವನೇಶ್ವರ), ಕೋನಾರ್ಕ ಮತ್ತು ಪೂರಿ ಎಂಬ ಪ್ರಸಿದ್ಧ ಸ್ಥಳಗಳನ್ನು ಅಮರಾವತಿ, ಕಾಲಕಾಲ ಎಂಬಂಥ ಅಪ್ರಸಿದ್ಧ ಸ್ಥಳಗಳನ್ನು ಅವನು ಹೇಳಿದ್ದಾನೆ.

ಒರಿಸ್ಸಾ ರಾಜನ ಸೇನೆಯಲ್ಲಿ ಒಬ್ಬ ಸೈನಿಕನಾಗಿ ಅವನು ಓಡಾಡಿದ ದಕ್ಷಿಣ ಭಾರತದ ಆಂಧ್ರ ಪ್ರದೇಶದ ಬಗ್ಗೆ ಅವನು ವಿವರವಾದ ಪರಿಚಯವನ್ನು ತೋರಿಸುತ್ತಾನೆ. ಅವನ ಕಾಲದಲ್ಲಿ ದಕ್ಷಿಣ ಭಾರತವು ರಾಜಕೀಯವಾಗಿ ಹೇಗೆ ವಿಭಾಗವಾಗಿದ್ದಿತೆಂಬುದನ್ನು ನಿರ್ದಿಷ್ಟವಾಗಿ ಅವನು ಸೂಚಿಸುತ್ತಾನೆ. ಅವಾವುವೆಂದರೆ: ಅವನ ಸಮಕಾಲೀನನಾದ ಮಲ್ಲಿಕಾರ್ಜುನನು ಆಳುತ್ತಿದ್ದ ವಿಜಯನಗರದ ರಾಜ್ಯವಾದ ಮಲ್ಲಿಕ ಮಂಡಲ ಅಥವಾ ವಿಜಯಮಂಡಲ, ಚೋಳಮಂಡಳ, ಉದಯಮಂಡಲ ಅಥವಾ ಕಾಂಚೀಮಂಡಲ-ಇದು ಉದಯಗಿರಿ ಮತ್ತು ಕಾಂಚಿ ಎಂಬ ಸ್ಥಳಗಳಿದ್ದ ಸಾಳುವ ನರಸಿಂಹನು ಆಳುತ್ತಿದ್ದ ಪ್ರದೇಶ, ಕೋಸಲ ಮಂಡಲ ಅಥವಾ ಬ್ರಹ್ಮಸಾಹಿ ಅಂದರೆ ಕವಿಯು ಬಹಮನಿ ರಾಜ್ಯವೆಂದು ಖಂಡಿತ ಉದ್ದೇಶಿಸಿದ್ದಾನೆ. ಇದರಿಂದ ಆಚೆಗೆ ಚೀರದೇಶ ಅಥವಾ ಚೇರದೇಶ ವಿತ್ತು. ಅದೇ ಕೇರಲ ದೇಶ. ಅದರಿಂದಾಚೆ, ಕಜ್ಜಲಿದೇಶ ಅಥವಾ ಖಿನ್ನದೇಶ ಅಂದರೆ ಕೊಂಕಣ ಮತ್ತು ಅದರ ಮುಖ್ಯ ದುರ್ಗವಾದ ಖೇಲ್ನ.

ಈ ಮುಖ್ಯ ವಿಭಾಗಗಳಲ್ಲಿ ಇರುವ ಅನೇಕ ಸ್ಥಳಗಳ ಹೆಸರುಗಳನ್ನು ಕವಿಯು ಹೇಳುತ್ತಾನೆ. ಆಂಧ್ರ ಪ್ರದೇಶದಲ್ಲಿ ಸೇರಿರುವ ಮಹೇಂದ್ರ ನಗರ (ಈಗಿನ ರಾಜ

ಮಹೇಂದ್ರಿ, ರಾಜಮಂಡ್ರಿ), (ಗುಂಟೂರು ಜಿಲ್ಲೆಯಲ್ಲಿರುವ ಕೊಂಡವೀಡು ಅಥವಾ) ಕುಂಡವೇದಿ, ಅಮರಚೂಡ ಪರ್ವತ ಅಥವಾ ನಾಲ್ಗೊಂಡ ಜಿಲ್ಲೆಯಲ್ಲಿರುವ ದೇವರ ಕೊಂಡ, ಸಾಲುವ ನರಸಿಂಹನ ರಾಜ್ಯದ ಪ್ರಸಿದ್ಧ ದುರ್ಗಗಳಾದ ಉದಯಗಿರಿ ಮತ್ತು ಚಂದ್ರಗಿರಿ ಮತ್ತು ಪ್ರಾಚೀನ ಕಾಕತೀಯ ದೊರೆಗಳ ರಾಜಧಾನಿಯಾಗಿದ್ದ ಕಾಕತೀಪುರ ಇವುಗಳನ್ನು ಹೆಸರಿಸಿದ್ದಾನೆ. ಅನೇಕ ಚಿಕ್ಕ ಚಿಕ್ಕ ಊರುಗಳಾದ ಭದ್ರಾಚಲ, ವಿಜಯ ವಾಡ, ಮತಂಗ ಅಥವಾ ಶ್ರೀಶೈಲ, ಪಾತಾಳಗಂಗಾ ಮುಂತಾದ ಹೆಸರುಗಳನ್ನು ಹೇಳಿ ದ್ದಾನೆ. ಹತ್ತಿರದಲ್ಲಿಯೇ ಪಾತಾಳಗಂಗೆಯು ಹರಿಯುತ್ತಿರುವ ಶ್ರೀಶೈಲ ಪರ್ವತದ ತುದಿಯಲ್ಲಿರುವ ಮಲ್ಲಿಕಾರ್ಜುನ ದೇವತೆಯ ಮೂಲಕ್ಕೆ ಸಂಬಂಧಿಸಿದ ಪೌರಾಣಿಕ ಕಥೆ ಗಳನ್ನು ಕವಿಯು ದಾಖಲಿಸಿದ್ದಾನೆ. ಗಜಪತಿ ವಂಶದ ದೊರೆಯಾದ ಕಪಿಲೇಂದ್ರನಿಗೂ ಬಹಮನಿ ದೊರೆಯಾದ ಹುಮಾಯೂನನಿಗೂ ನಡೆದ ದೇವರಕೊಂಡದ ಯುದ್ಧದ ಬಗ್ಗೆ ಒಂದು ದೀರ್ಘವಾದ ಉಪಾಖ್ಯಾನವನ್ನು ಪೌರಾಣಿಕ ಶೈಲಿಯಲ್ಲಿ ಕವಿಯು ರಚಿಸಿ ದ್ದಾನೆ.

ತಮಿಳುನಾಡಿಗೆ ಸಂಬಂಧಿಸಿದಂತೆ, ಕಾಂಚೀ, ಚಂದ್ರಪುರ (ಈಗಿನ ಚಿಂಗಲ್ ಪೇಟೆ), ಕಾವೇರಿಪಟ್ಟಣ (ಬಹುಶಃ ಈಗ ನಾಗಪಟ್ಟಣ), ಉದಂಗ (ತಿರುಚನಾಪಳ್ಳಿಯ ಪ್ರಾಚೀನ ಕಾಲದ ಹೆಸರಾದ ಉದಂಗಪುರ ಅಥವಾ ಉರಗಪುರ ಎಂಬುದರ ಹ್ರಸ್ವರೂಪ), ಪದ್ಮ ನಾಭಪರ್ವತ (ಶ್ರೀರಂಗದ ದೇವಸ್ಥಾನ), ರುದ್ರಪರ್ವತ (ತಂಜಾವೂರಿನ ದೇವಸ್ಥಾನ), ಪಾಂಡವನಗರ (ಮಧುರೆ), ರಾಮೇಶ್ವರ, ಸೇತುಬಂಧ ಮುಂತಾದ ಹೆಸರುಗಳನ್ನು ಹೇಳಿದ್ದಾನೆ. ಮೈಸೂರಿಗೆ ಸಂಬಂಧಿಸಿದಂತೆ ಬೇತಾರ (ಬಳ್ಳಾರಿ), ಬೇಲ ನಗರ (ಹಾಸನ ಜಿಲ್ಲೆಯಲ್ಲಿರುವ ಬೇಲೂರು, ಸುರವರ ಪಟ್ಟಣ (ಶ್ರೀರಂಗಪಟ್ಟಣ ಮತ್ತು ಪೌಲವತಿ ನಗರ) ಬಹುಶಃ ಮೈಸೂರು ನಗರ-ಈ ಹೆಸರುಗಳನ್ನು ಹೇಳಿದ್ದಾನೆ.

ತನ್ನ ಮಹಾಭಾರತದಲ್ಲಿ ಸರಳದಾಸನು ಪ್ರದರ್ಶಿಸಿರುವ ಆತನ ಭೌಗೋಳಿಕ ಜ್ಞಾನವನ್ನು ಈ ಪುಸ್ತಕದ ಸೀಮಿತ ಅವಕಾಶದಲ್ಲಿ, ಸಂಪೂರ್ಣವಾಗಿ ಓದುಗನಿಗೆ ಒದಗಿಸು ವುದು ಸಾಧ್ಯವಾಗದ ಮಾತು. ಇನ್ನು ಕವಿಯು ಹೇಳಿರುವ ಚಾರಿತ್ರಿಕ ಹೆಸರುಗಳ ಕಡೆ ಗಮನ ಕೊಡೋಣ. ಚೌಹಾಣರು, ಚಾಲುಕ್ಯರು, ಸೋಲಾಂಕಿಗಳು, ಹೈಹಯರು, ಯಾದವರು, ಮತ್ತು ಆಂಧ್ರರು ಮುಂತಾದ ಚಾರಿತ್ರಿಕ ರಾಜವಂಶಗಳನ್ನು ಸ್ವಲ್ಪ ವಿರೂಪಗೊಂಡ ಹೆಸರುಗಳೊಡನೆ ಆತನು ಉಲ್ಲೇಖಿಸುತ್ತಾನೆ. ಒರಿಸ್ಸಾ ದೇಶದ ದೊರೆ ಗಳಾದ ಸೂರ್ಯವಂಶೀ ಮನೆತನದ ಯಯಾತಿ ಮತ್ತು ಗಂಗಮನೆತನದ ಚೂಡಾಂಗ (ಚೋಡಗಂಗ) ಎಂಬ ಹೆಸರುಗಳನ್ನು ಹೇಳಿದ್ದಾನೆ. ಕವಿಯು ಸಮಕಾಲೀನರಾಗಿದ್ದ ವಿಜಯನಗರದ ಚಕ್ರವರ್ತಿಗಳಾದ ಮಲ್ಲಿಕಾರ್ಜುನ ಮತ್ತು ವಿರೂಪಾಕ್ಷ ಎಂಬವರ ಹೆಸರನ್ನಂತೂ ಕವಿಯು ಅನೇಕ ಸಲ ಉಲ್ಲೇಖಿಸಿದ್ದಾನೆ. ಸರಳದಾಸನು ತನ್ನ ಸಭಾ ಪರ್ವದಲ್ಲಿ ಸಹದೇವನ ದಿಗ್ವಿಜಯವನ್ನು ವರ್ಣಿಸುವಾಗ, ಬಂಗಾಳದ ವಿವಿಧ ಪ್ರದೇಶ

ಗಳಿಗೆ ಅವನನ್ನು ಕರೆದೊಯ್ದು ಆ ಪ್ರದೇಶಗಳಲ್ಲಿ ಕುಲಚಂದ್ರ, ಜ್ಞಾನಚಂದ್ರ ಬೇಲಾಲಸೇನ (ಬಲ್ಲಾಳಸೇನ), ಮತ್ತು ಕೇಶವಸೇನ ಎಂಬ ರಾಜರು ಆಳುತ್ತಿದ್ದರೆಂದು ತಿಳಿಸುತ್ತಾನೆ. ಅದರ ಜೊತೆಯಲ್ಲಿಯೆ, ಹಸ್ತಿಕಾಲ ನಗರ ಮತ್ತು ಮಧುಮಾತಂಗ ದೇಶ ಎಂಬ ಪ್ರದೇಶಗಳನ್ನೂ ಹೆಸರಿಸುತ್ತಾನೆ. ಬಹುಶಃ ಇವು ಹರಿಕಾಲ ನಗರ ಮತ್ತು ಮಥನದೇಶ ಎಂಬುವುಗಳ ವಿರೂಪಗೊಂಡ ಸ್ವರೂಪವಿರಬೇಕು. ಪೂರ್ವಬಂಗಾಳದಲ್ಲಿ ಆಳುತ್ತಿದ್ದ ಹರಿಕಾಲದೇವ ರಣದಂಕಮಲ್ಲಿ ಮತ್ತು ಮಧುಮಥನದೇವ ಎಂಬ ರಾಜರುಗಳು ಚಾರಿತ್ರಕವಾಗಿ ಆಳುತ್ತಿದ್ದರೆಂಬುದಕ್ಕೆ ಶಾಸನದ ದಾಖಲೆಗಳಿವೆ. ರಾಜಸೂಯಯಾಗದ ಸಂದರ್ಭದಲ್ಲಿ ಸಹದೇವನು ಮಿಥಿಲೆಗೆ ಹೋದಾಗ ಅಲ್ಲಿ ನಂದಸೇನ ಎಂಬ ರಾಜನು ಆಳುತ್ತಿದ್ದನೆಂದು ಹೇಳಲಾಗಿದೆ. ನಂದಸೇನ ಎಂಬುದು ಚಾರಿತ್ರಿಕ ರಾಜನಾದ ನಾನ್ಯಸೇನ ಅಥವಾ ನಾನ್ಯದೇವ ಎಂಬುದರ ವಿರೂಪವಿರಬಹುದು ಅಥವಾ ಲಿಪಿಕಾರನ ದೋಷವಿರಬಹುದು.

ಪಾಂಡವರು ರಾಜಸೂಯ ಯಾಗವನ್ನು ಮಾಡಿದ ಸಂದರ್ಭದಲ್ಲಿ, ಸ್ವಾತಂತ್ರ್ಯಕ್ಕಾಗಿ ಅಲ್ಲಾವುದ್ದೀನ್ ಖಿಲ್ಜಿಗೆ ಎದುರಾಗಿ ಯುದ್ಧದಲ್ಲಿ ನಿರತರಾಗಿದ್ದ ಎಲ್ಲ ರಾಜರನ್ನೂ ಪಾಂಡವರು ಆಹ್ವಾನಿಸಿದರೆಂದು ಸರಳದಾಸನು ಹೇಳುತ್ತಾನೆ. ಈ ರಾಜರುಗಳ ಹೆಸರುಗಳು ಸ್ವಲ್ಪ ವಿರೂಪಗೊಂಡಿದ್ದರೂ ಅವರ ರಾಜ್ಯದ ಹೆಸರುಗಳು ಅದಲು ಬದಲಾಗಿದ್ದರೂ, ಅವರ ಬಗ್ಗೆ ಕವಿಯು ಬರೆದಿರುವ ಉಪಾಖ್ಯಾನಗಳನ್ನು ಗಮನಿಸಿದರೆ, ಅವರನ್ನು ಗುಜರಾತಿನ ಬಾಘೇರರ ದೊರೆ ಕರ್ಣದೇವ, ಯಾದವರ ದೊರೆ ರಾಮಚಂದ್ರದೇವ, ದೇವಗಿರಿಯ ಶಂಕರದೇವ, ಚಿತ್ತೂರಿನ ಶಿಶೋದಯ ರಾಜನಾದ ಹಮ್ಮೀರದೇವ, ತೆಲಂಗಾಣದ ಕಾಕತೀಯರ ದೊರೆಯಾದ ಪ್ರತಾಪರುದ್ರದೇವ, ದಕ್ಷಿಣದ ಪಾಂಡ್ಯರ ದೊರೆ ವೀರಪಾಂಡ್ಯ ಇವರೊಡನೆ ಸಮೀಕರಿಸುವುದು ಸಾಧ್ಯವಾಗುತ್ತದೆ. ಈ ಸ್ವಾತಂತ್ರ್ಯದ ಹೋರಾಟಗಾರರ ಪಟ್ಟಿಯಲ್ಲಿ ಅಲ್ಲಾವುದ್ದೀನ್ ಖಿಲ್ಜಿಯು ಗೆದ್ದ ಮೈಸೂರಿನ ಹೊಯ್ಸಳ ರಾಜನಾದ ವೀರ ಬಳ್ಳಾಲನ ಹೆಸರನ್ನು ಮಾತ್ರ ಬಿಟ್ಟಿದ್ದಾನೆ. ಹೀಗೆ ಬಿಟ್ಟಿರುವುದು ಉದ್ದೇಶಪೂರಿತವಾದುದೆಂದು ಕಾಣುತ್ತದೆ. ವೀರಬಲ್ಲಾಳನು ಯುದ್ಧವನ್ನೇ ಮಾಡಲಿಲ್ಲ, ತನ್ನ ರಾಜಧಾನಿಯಾದ ದ್ವಾರಸಮುದ್ರದ ಅಗಸೆಯ ಬಾಗಿಲ ಬಳಿಗೆ ಮಲ್ಲಿಕ್‌ಕಾಫರನು ಬಂದಾಗ, ಹಿತೈಷಿಗಳ ಮಾತನ್ನು ಲೆಕ್ಕಿಸದೆ, ತನ್ನ ರಾಜ್ಯವನ್ನೂ, ಐಶ್ವರ್ಯವನ್ನೂ ಸಂಪೂರ್ಣವಾಗಿ ಒಪ್ಪಿಸಿ ಬಿಟ್ಟನು. ಈ ಕಾರಣದಿಂದ ಅವನು ಪಾಂಡವರ ಆಹ್ವಾನಕ್ಕೆ ಅಯೋಗ್ಯನೆಂದು ಗಣಿಸಿ ಅವನನ್ನು ಕಡೆಗಣಿಸಿರಬಹುದು.

ಸರಳ ಮಹಾಭಾರತದಿಂದ ಹೊರತೆಗೆಯಬಹುದಾದ ಭೌಗೋಳಿಕ ಮತ್ತು ಚಾರಿತ್ರಕ ಅಂಶಗಳ ನಿರೂಪಣೆಯು ಬಹು ಸಂಗ್ರಹವಾದುದು. ಈ ಗ್ರಂಥದಲ್ಲಿ ದೊರಕುವ ಚಾರಿತ್ರಕ ಮತ್ತು ಭೌಗೋಳಿಕ ವಿಷಯ ಸಂಗ್ರಹವು ಪ್ರಾಚೀನ ಮತ್ತು ಮಧ್ಯಕಾಲಿನ ಭಾರತದಲ್ಲಿ ಹಿಂದೂಗಳು ಬರೆದ ಗ್ರಂಥಗಳಲ್ಲಿ ದೊರಕಬಹುದಾದ ಅಂಶಗಳಿಗಿಂತ ಎಷ್ಟೋ

ರೀತಿಯಲ್ಲಿ ಭಿನ್ನವಾಗಿದೆ. ಲಿಪಿಕಾರರ ದೋಷದಿಂದಲೂ, ಮುದ್ರಕರ ದೋಷದಿಂದಲೂ ಈ ಗ್ರಂಥದಲ್ಲಿ ಅನೇಕ ಅಂಶಗಳು ಬಹು ಮೌಲಿಕವಾದ ವಿಷಯಗಳನ್ನು ಮರೆಮಾಡಿವೆ. ಮಹಾಭಾರತದಂಥ ಪವಿತ್ರ ಗ್ರಂಥದಲ್ಲಿ ಸಾಂಪ್ರದಾಯಿಕವಾಗಿ ಸೇರದೆ ಇರಬಹುದಾದ ಅನೇಕ ವಿಷಯಗಳು ಸರಳದಾಸನ ಗ್ರಂಥದಲ್ಲಿವೆ. ಅವನು ತನ್ನ ಕಾಲದಲ್ಲಿದ್ದ ಅನೇಕ ದ್ವೇಷಾಸೂಯೆಗಳಿಂದ ಮುಕ್ತನಾಗಿದ್ದನು. ಆದುದರಿಂದ ಅನೇಕ ಮಾನವ ವ್ಯವಹಾರದ ಅಂಶಗಳನ್ನು ಸೇರಿಸಿದ್ದಾನೆ. ಆತನ ಕಾಲದ ಮಹಮ್ಮದೀಯರು ಆಳುತ್ತಿದ್ದ ಭೌಗೋಳಿಕ ಪ್ರದೇಶಗಳ ಚಾರಿತ್ರಿಕ ಅಂಶಗಳನ್ನೂ ಸೇರಿಸಿದ್ದಾನೆ. ಅವನ ಮಹಾಭಾರತವು ಸಂಸ್ಕೃತಮೂಲ ಮಹಾಭಾರತದ ಅನುವಾದವೂ ಅಲ್ಲ ರೂಪಾಂತರವೂ ಅಲ್ಲ ಎಂಬುದನ್ನು ನಾವು ಈಗಾಗಲೇ ಹೇಳಿದ್ದೇವೆ. ಅವನ ಸ್ವಂತ ಅನುಭವಗಳನ್ನು ತಿಳುವಳಿಕೆಯನ್ನು ದಾಖಲೆ ಮಾಡುವುದಕ್ಕೆ ಮೂಲ ಮಹಾಭಾರತದ ಕಥೆಯು ಒಂದು ಸಾಧನವಾಗಿದೆ ಅಷ್ಟೆ! ಮಹಾಭಾರತವನ್ನು ಅವನು ರಚಿಸುತ್ತಿದ್ದಾಗ ತಾನು ವಾಸಿಸುತ್ತಿದ್ದ ಪ್ರದೇಶದ ಮತ್ತು ತನ್ನ ಸುತ್ತಮುತ್ತ ದೊರಕುತ್ತಿದ್ದ ವಿವಿಧ ಕ್ಷೇತ್ರಗಳ ಜ್ಞಾನ, ತನ್ನ ಕಾಲದ ಭೌಗೋಳಿಕ ವಿಭಾಗಗಳು ಮತ್ತು ಚಾರಿತ್ರಿಕ ಘಟನೆಗಳು ಇವುಗಳ ಬಗ್ಗೆ ಅವನು ಕಣ್ಮುಚ್ಚಿ ಕುಳಿತಿರಲಿಲ್ಲ. ಸರಳದಾಸನಿಗೆ ಅತ್ಯುತ್ತಮವಾದ ಸ್ಮರಣ ಶಕ್ತಿಯಿದ್ದಿತೆಂಬುದನ್ನು ಒಪ್ಪಿಕೊಂಡರೂ, ಭೌಗೋಳಿಕ ಮತ್ತು ಚಾರಿತ್ರಿಕ ಅಂಶಗಳನ್ನು ಅವನು ಅವನ ಕಾಲದ ಅವನಿಗೂ ದೊರಕುತ್ತಿದ್ದ ಯಾವುದೋ ದಾಖಲೆಗಳಿಂದ ಸಂಗ್ರಹಿಸಿರಬೇಕೆಂದು ಒಪ್ಪಿಕೊಳ್ಳಬೇಕಾಗುತ್ತದೆ. ಭಾರತದಲ್ಲಿ ಹಿಂದೂಗಳು ಆಳುತ್ತಿದ್ದ ಕಾಲದಲ್ಲಿ ಕೆಲವು ಮಾನ್ಯವಾದ ಅಪವಾದಗಳನ್ನು ಬಿಟ್ಟರೆ ಬರೆದಿಟ್ಟ ಚರಿತ್ರೆಯಾಗಲಿ, ಭೂಗೋಳವಾಗಲಿ ಇರಲಿಲ್ಲ. ಆದರೆ ಎಲ್ಲ ಹಿಂದೂ ರಾಜ್ಯದ ಆಡಳಿತಗಳಲ್ಲೂ ಪರಂಪರೆಯಿಂದ ಬಂದ ಸಾಂಪ್ರದಾಯಿಕವಾದ ಚಾರಿತ್ರಿಕ ಭೌಗೋಳಿಕ ವಿಷಯ ಸಂಗ್ರಹವನ್ನು ತಲೆಮಾರಿನಿಂದ ತಲೆಮಾರಿಗೆ ಮುಂದುವರಿಸಿಕೊಂಡು ಹೋಗುತ್ತಿದ್ದ ಚಾರಿತ್ರಿಕ ಭೌಗೋಳಿಕ ವಿಚಾರವಾದ ಪರಿಚಯವುಳ್ಳವರನ್ನು ಎಲ್ಲ ಪ್ರಮುಖ ಹಿಂದೂ ರಾಜರೂ ತಮ್ಮ ಸೇವೆಯಲ್ಲಿ ನೇಮಿಸಿಕೊಳ್ಳುತ್ತಿದ್ದರು. ಈ ಸಾಂಪ್ರದಾಯಿಕವಾದ ತಿಳಿವಳಿಕೆಯಲ್ಲಿ ಖಚಿತತೆಯಿರುತ್ತಿರಲಿಲ್ಲ. ಆದರೂ ಪರ ರಾಜ್ಯಗಳೊಡನೆ ಸಂಬಂಧಗಳನ್ನು ಯುದ್ಧ ಸಮಯಗಳಲ್ಲಿ ಸೈನ್ಯದ ಚಲನವಲನಗಳನ್ನು ನಿರ್ದೇಶಿಸಲು ಅದು ಸಹಾಯಕವಾಗುತ್ತಿತ್ತು. ಕ್ರಿ. ಶ. ಹದಿನೈದನೆಯ ಶತಮಾನದಲ್ಲಿ ಒರಿಸ್ಸಾ ಪ್ರಾಂತವು ಒಂದು ಪ್ರಮುಖವಾದ ಹಿಂದೂ ರಾಜ್ಯವಾಗಿತ್ತು. ಆದುದರಿಂದ ಅದು ಭೌಗೋಳಿಕ ಚಾರಿತ್ರಿಕ ತಜ್ಞರನ್ನು ನೇಮಿಸಿಕೊಂಡಿರುವುದು ಅಸಾಧ್ಯವಾದ ವಿಚಾರವೇನಲ್ಲ. ತನ್ನ ಪ್ರಾರಂಭಿಕ ಜೀವನದಲ್ಲಿ ಸೈನಿಕನಾಗಿದ್ದ ಸರಳದಾಸನಿಗೆ ಇಂತಹ ತಿಳುವಳಿಕೆಗೆ ಪ್ರವೇಶವಿದ್ದಿರುವ ಸಾಧ್ಯತೆಯಿದೆ.

# ಪುಸ್ತಕ ಗ್ರಂಥಸೂಚಿ

## I ಒರಿಯಾ ಗ್ರಂಥಗಳು

**1. ಕಳಶ ಚೌತೀಶ :** ಮೂವತ್ತು ನಾಲ್ಕು ಪದ್ಯಗಳುಳ್ಳ ಒಂದು ಪುಟ್ಟ ಗ್ರಂಥ-ಸರಳದಾಸನಿಗಿಂತ ಹಿಂದಿನವನೆಂದು ಸಾಮಾನ್ಯವಾದ ನಂಬಿಕೆಯಿದೆ. ಅದು ಶಿವನೊಡನೆ ಪಾರ್ವತಿಯ ವಿವಾಹವನ್ನು ವರ್ಣಿಸುತ್ತದೆ.

**2. ಮಾರ್ಕಂಡದಾಸ : ಕೇಶವ ಕೋಯಿಲಿ** ಇದರಲ್ಲಿಯೂ 34 ಪದ್ಯಗಳಿವೆ. ಪ್ರತಿಯೊಂದು ಪದ್ಯವೂ ಒರಿಯಾ ಅಕ್ಷರ ಮಾಲಿಕೆಯ ಕ್ರಮವಾದ ವ್ಯಂಜನಾಕ್ಷರಗಳಿಂದ ಮೊದಲಾಗುತ್ತದೆ. ಇವನು ಸರಳದಾಸನಿಗಿಂತ ಮುಂಚೆ ಇದ್ದವನೆಂದು ನಂಬಲಾಗಿದೆ. ಈ ಕಾವ್ಯವು ಯಶೋದೆಯು ತನ್ನ ಮಗನು ಗೋಪಪುರವನ್ನು ಬಿಟ್ಟಮೇಲೆ ಆದ ದುಃಖವನ್ನು ಕೋಗಿಲೆಗೆ ತೋಡಿಕೊಂಡಂತೆ ಚಿತ್ರಿಸುತ್ತದೆ.

**3. ಸರಳದಾಸ : ವಿಲಂಕಾ ರಾಮಾಯಣ**

ಇದು ಈ ಕವಿಯ ಪ್ರಥಮ ಕಾವ್ಯ. ಇದರ ಅನೇಕ ಸಂಪಾದಿತ ಪ್ರಕಟಣೆಗಳಿವೆ. ಈ ಸಣ್ಣಪುಸ್ತಕದ ರಚನೆಯಲ್ಲಿ 1951 ರಲ್ಲಿ ಕಟಕ್‌ನಲ್ಲಿ ರಾಧಾರಮಣ ಪುಸ್ತಕಾಲಯದಿಂದ ಪ್ರಕಟವಾದ ಸಂಪಾದನೆಯನ್ನು ಉಪಯೋಗಿಸಿಕೊಳ್ಳಲಾಗಿದೆ.

**4. ಸರಳದಾಸ – ಮಹಾಭಾರತ**

ಇದು ಈ ಕವಿಯ ಅತ್ಯಂತ ಶ್ರೇಷ್ಠಗ್ರಂಥ. ಈ ಗ್ರಂಥದ ಅನೇಕ ಪ್ರಕಟಣೆಗಳಿವೆ. ಅವುಗಳಲ್ಲಿ 1956 ರಲ್ಲಿ ಕಟಕ್‌ನಲ್ಲಿ ರಾಧಾರಮಣ ಮುದ್ರಣಾಲಯದವರು ಪ್ರಕಟಿಸಿರುವ ಸಂಪಾದನೆಯೇ ಅತ್ಯಂತ ಉತ್ತಮವಾದುದೆಂದು ಕಾಣಬರುತ್ತದೆ. ಒರಿಸ್ಸಾ ಸರ್ಕಾರವು ಕೈಗೊಂಡಿರುವ ಹೆಚ್ಚು ಅಧಿಕೃತವಾದ ಪ್ರಕಟಣೆ ಇಷ್ಟರಲ್ಲೇ ಪ್ರಕಟವಾಗಲಿದೆ.

**5. ಸರಳದಾಸ – ಚಂಡೀಪುರಾಣ**

ಇದು ಸರಳದಾಸನ ಕೊನೆಯ ಕೃತಿ. ಇದನ್ನು ಅನೇಕ ಬಾರಿ ಸಂಪಾದಿಸಿ ಪ್ರಕಟಿಸಿದ್ದಾರೆ. ಅವುಗಳಲ್ಲಿ 1953 ರಲ್ಲಿ ಕಟಕ್ ಅರುಣೋದಯ ಮುದ್ರಣಾಲಯವು ಪ್ರಕಟಿಸಿರುವ ಪುಸ್ತಕವನ್ನು ಈ ಗ್ರಂಥದಲ್ಲಿ ಉಪಯೋಗಿಸಲಾಗಿದೆ,

**6. ಪಂಡಿತ ಗೋಪೀನಾಥನಂದಶರ್ಮ :– ಶ್ರೀ ಭಾರತದರ್ಪಣ**

ಇದು ಸರಳದಾಸನ ಮಹಾಭಾರತವನ್ನು ಕುರಿತ ಪಾಂಡಿತ್ಯಪೂರ್ಣವಾದ ಗ್ರಂಥ. ಮೊದಲ ಮುದ್ರಣದ ಪ್ರತಿಗಳು ಸಿಗದಿರುವದರಿಂದ ಭುವನೇಶ್ವರದ ಸಾಹಿತ್ಯ

ಅಕಾಡೆಮಿಯು ಪ್ರಕಟಿಸಿದೆ. ಆದರ ಬಳಿಯೇ ಆ ಪುಸ್ತಕವು ಮಾರಾಟಕ್ಕೆ ಸಿಕ್ಕುತ್ತದೆ.

**7. ಸರಳಸ್ಮರಣೀಕ** ಪ್ರಜಾತುತ್ರ ಮುದ್ರಣಾಲಯ, ಕಟಕ್, 1984.

ಇದು ಸರಳದಾಸನ ಜೀವನವನ್ನೂ ಕೃತಿಗಳನ್ನೂ ಕುರಿತು ಅನೇಕ ಲೇಖಕರು ಬರೆದಿರುವ ಲೇಖನ ಸಂಗ್ರಹ. 1954 ರಲ್ಲಿ ಪ್ರಜಾತಂತ್ರ ಪ್ರಚಾರ ಸಮಿತಿಯು ಆಚರಿಸಿದ ಕವಿಯ ವಾರ್ಷಿಕೋತ್ಸವದಂದು ಪ್ರಕಟವಾಯಿತು.

## II ಸಂಸ್ಕೃತ ಗ್ರಂಥಗಳು

1. ಮಹಾಭಾರತ
2. ರಘುವಂಶ
3. ಶ್ರೀಮದ್ಭಗವದ್ಗೀತಾ
4. ಶ್ರೀಮದ್ಭಾಗವತ ಪುರಾಣ
5. ಭಾರತ ಸಾವಿತ್ರೀ
6. ಏಕಾಮ್ರಪುರಾಣ (ಕಟಕ್‌ನ ರಾಧಾರಮಣ ಮುದ್ರಣಾಲಯ)
7. ಗೀತಗೋವಿಂದ.

ಈ ಪುಸ್ತಕಗಳಲ್ಲಿ 2 ರಿಂದ 7 ರ ವರೆಗಿನ ಗ್ರಂಥಗಳು ಸರಳದಾಸನ ಮಹಾಭಾರತದ ಮೇಲೆ ಬೀರಿರುವ ಪ್ರಭಾವವನ್ನು ಅಧ್ಯಾಯ I ಮತ್ತು II ರಲ್ಲಿ ಚರ್ಚಿಸಲಾಗಿದೆ. ಸರಳದಾಸನ ಮಹಾಭಾರತಕ್ಕೂ ಮೂಲ ಸಂಸ್ಕೃತ ಮಹಾಭಾರತಕ್ಕೂ ಇರುವ ವ್ಯತ್ಯಾಸವನ್ನು ಅಧ್ಯಾಯ III ರಲ್ಲಿ ಸ್ಪಷ್ಟಪಡಿಸಲಾಗಿದೆ.

## III ಚಾರಿತ್ರಿಕ ಗ್ರಂಥಗಳು

1. ಬಂಗಾಳದ ಚರಿತ್ರೆ – ಹಿಸ್ಟರಿ ಆಫ್ ಬೆಂಗಾಲ್
   ಡಾಕಾ ಯೂನಿವರ್ಸಿಟಿ ಸಂಪುಟ I ಮತ್ತು II
2. ಭಾರತೀಯ ವಿದ್ಯಾಭವನ – ದಿ ಏಜ್ ಆಫ್ ಇಂಪೀರಿಯಲ್ ಕನೌಜ್
3. ಭಾರತೀಯ ವಿದ್ಯಾಭವನ – ದಿ ಸ್ಟ್ರಗಲ್ ಫಾರ್ ಎಂಪೈರ್
4. ಭಾರತೀಯ ವಿದ್ಯಾಭವನ – ದಿ ಡೆಲ್ಲಿ ಸುಲ್ತಾನೇಟ್
5. ಹೆಚ್. ಮಹತಾಬ್ – ಹಿಸ್ಟರಿ ಆಫ್ ಒರಿಸ್ಸಾ, ಸಂಪುಟ I ಮತ್ತು II
6. ಪಿ. ಮುಖರ್ಜಿ – ಗಜಪತಿ ಕಿಂಗ್ಸ್ ಆಫ್ ಒರಿಸ್ಸಾ, ಕಲ್ಕತ್ತಾ 1953
7. ಎ. ಕೆ. ಎನ್. ಶಾಸ್ತ್ರಿ ಮತ್ತು ಎನ್. ವೆಂಕಟರಮಣಯ್ಯ – ಫರ್‌ದರ್ ಸೋರ್ಸಸ್ ಆಫ್ ವಿಜಯನಗರ್ ಹಿಸ್ಟರಿ
8. ಎನ್. ವೆಂಕಟರಮಣಯ್ಯ – ವಿಜಯನಗರ್-ಆರಿಜನ್ ಆಫ್ ದಿ ಸಿಟಿ ಅಂಡ್ ದಿ ಎಂಪೈರ್, 1953

9. ಎಸ್. ಕೃಷ್ಣಸ್ವಾಮಿ ಐಂಗಾರ್ – ಸೋರ್ಸಸ್ ಆಫ್ ವಿಜಯನಗರ್ ಹಿಸ್ಟರಿ- 1919.

ಸರಳದಾಸನ ಸಮಕಾಲೀನನಾದ ರಾಜ ಕಪಿಲೇಂದ್ರನ ಬಗ್ಗೆ ಅಗತ್ಯವಾದ ವಿವರಗಳನ್ನು ಸಂಗ್ರಹಿಸುವುದಕ್ಕೂ, ಕವಿಯ ಸಾಹಿತ್ಯವು ಹುಟ್ಟಿದ ಚಾರಿತ್ರಿಕ ಕಾಲದ ಬಗ್ಗೆ ಅಭಿಪ್ರಾಯವನ್ನು ಮೂಡಿಸುವುದಕ್ಕೂ ಉಪಯೋಗಿಸಿಕೊಳ್ಳಲಾಗಿದೆ. ಸರಳ ದಾಸನು ತನ್ನ ಮಹಾಭಾರತದಲ್ಲಿ ಹೇಳಿರುವ ಮತ್ತು ಈ ಗ್ರಂಥದಲ್ಲಿ ನಾಲ್ಕನೆಯ ಅಧ್ಯಾಯದಲ್ಲಿ ನಿರೂಪಿಸಿರುವ ರಾಜವಂಶಗಳ ಚರಿತ್ರೆಯು ಈ ಪುಸ್ತಕದ 1–6 ಅಧ್ಯಾಯವಲ್ಲಿ ಕಾಣಬರುತ್ತದೆ. ಕವಿಯು ಹೇಳಿರುವ ಸ್ಥಳ ನಾಮವನ್ನು ನಿರ್ದೇಶಿಸುವಲ್ಲಿಯೂ ಇದು ಸಹಕಾರಿ.

## IV ಸಾಹಿತ್ಯ ಚರಿತ್ರೆ

1. ಮಾಯಾಧರ ಮಾನಸಿಂಹ – ಹಿಸ್ಟರಿ ಆಫ್ ಒರಿಯಾ ಲಿಟರೇಚರ್, ಸಾಹಿತ್ಯ ಅಕಾದೆಮಿ, ನ್ಯೂಡೆಲ್ಲಿ

ಒರಿಯ ಸಾಹಿತ್ಯವು ಬೆಳೆದುಬಂದ ಚಾರಿತ್ರಿಕ ಕ್ರಮವನ್ನು ಈ ಗ್ರಂಥವು ವಿವರಿಸಲು ಪ್ರಯತ್ನಿಸುತ್ತದೆ. ಅಲ್ಲಿ ಸರಳದಾಸನ ಕೃತಿಗಳ ಪ್ರಾಧಾನ್ಯವನ್ನು ಚರ್ಚಿಸಲಾಗಿದೆ.

## V ಪ್ರಾಕ್ತನ ಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳು

1. ಎ. ಕನಿಂಗ್ಹಾಂ: ರಿಪೋರ್ಟ್ಸ್ ಆಫ್ ಆರ್ಕಿಆಲಜಿಕಲ್ ಸರ್ವೇ ಆಫ್ ಇಂಡಿಯಾ ಸಂಪುಟಗಳು XII, XVII ಮತ್ತು XX

2. ಎ. ಫ್ಯೂರರ್: ಮಾನ್ಯುಮೆಂಟ್ಸ್, ಅಥಾರಿಟೀಸ್ ಅಂಡ್ ಇನ್‌ಸ್ಕ್ರಿಪ್ಶನ್ಸ್ ಇನ್ ದಿ ನಾರ್ತ್ ವೆಸ್ಟ್ರನ್ ಪ್ರಾವಿನ್ಸಸ್ ಅಫ್ ಔಧ್ 1891

3. ಆರ್ಕಲಾಜಿಕಲ್ ಸರ್ವೆ ಆಫ್ ಮೈಸೂರು – ವಾರ್ಷಿಕ ವರದಿ 1939

4. ಎಸ್. ಎನ್. ಮಜುಂದಾರ್ ಶಾಸ್ತ್ರಿ – ಕನ್ನಿಂಗ್‌ಹ್ಯಾಮ್ಸ್ ಎನ್ಷಿಯಂಟ್ ಜಿಯಾಗ್ರಫಿ ಆಫ್ ಇಂಡಿಯಾ, ಕಲ್ಕತ್ತಾ

5. ಮೆಕ್-ಗಿಂಡಲ್ — ಎನ್ಷಿಯಂಟ್ ಇಂಡಿಯಾ ಆಜ್ ಡಿಸ್ಕ್ರೈಬೆಡ್ ಬೈ ಟಾಲೆಮಿ.

6. ಕೆ. ಸಿ. ಪಾಣಿಗ್ರಾಹಿ – ಆರ್ಕಿಯಲಾಜಿಕಲ್ ರಿಮೈನ್ಸ್ ಆಫ್ ಭುವನೇಶ್ವರ್, ಕಲ್ಕತ್ತಾ 1961.

ಈ ಪುಸ್ತಕವಲ್ಲಿ I ಅಧ್ಯಾಯದಲ್ಲಿ ಹೇಳಿರುವಂತೆ ಗೋಕರ್ಣೇಶ್ವರ ಲಿಂಗದ ಮೂಲಕ್ಕೆ ಸಂಬಂಧಿಸಿದ ಕಥೆಯನ್ನು ಕುಂತೀಶ್ವರ ಲಿಂಗದ ಮೂಲ ಕಥೆಗೆ ಅನ್ವಯಿಸಿದೆ. ಅಧ್ಯಾಯ 6 (ಪುಟಗಳು 21–22–220– 21) ಈ ಪುಸ್ತಕದಲ್ಲಿ ಅಧ್ಯಾಯ

IV ರಲ್ಲಿ ಸಂಗ್ರಹವಾಗಿ ಹೇಳಿರುವ ಸರಳ ಮಹಾಭಾರತದ ಸ್ಥಳನಾಮಗಳನ್ನು ಗುರುತಿಸುವುದರಲ್ಲಿ 1–5 ಅಧ್ಯಾಯಗಳನ್ನು ಉಪಯೋಗಿಸಲಾಗಿದೆ.

## VI ಪತ್ರಿಕೆಗಳು

1. **ಎಪಿಗ್ರಾಫಿಯಾ ಇಂಡಿಕಾ** : ಸಂಪುಟ III. ಸರಳದಾಸನು ಹೇಳುವ ಪಾತಾಳ ಗಂಗೆಯನ್ನು ಹೆಸರಿಸುತ್ತದೆ. ಪುಟ 61.

2. **ಎ. ಎ. ಮಿರಾಶಿ** – ಕಾರ್ಪಸ್ ಇನ್‌ಸ್ಕ್ರಿಪ್ಷನಮ್ ಇಂಡಿಕಾರಮ್ ಸಂಪುಟ IV. ಇಲ್ಲಿ ದಂಡಪುರದ ಹೆಸರು ಬರುತ್ತದೆ. (ಪುಟ CXXII). ಬಹುಶಃ ಇದು ದಂಡಕ ಭುಕ್ತಿಯ ರಾಜಧಾನಿಯಿರಬಹುದು. (ಪಶ್ಚಿಮ ಬಂಗಾಳದಲ್ಲಿರುವ ಮಿಡ್ನಾಪುರ). ಇದು ಸರಳದಾಸನ ಮಹಾಭಾರತದಲ್ಲಿಯೂ ಹೆಸರಿಸಲ್ಪಟ್ಟಿದೆ.

3. **ಜರ್ನಲ್ ಆಫ್ ದಿ ಏಷ್ಯಾಟಿಕ್ ಸೊಸೈಯಿಟಿ ಆಫ್ ಬೆಂಗಾಲ್** — ಸಂಪುಟ LXIX, 1901. ಸರಳದಾಸನ ಸಮಕಾಲೀನನಾದ ಕಪಿಲೇಂದ್ರ ರಾಜನ ಹುಟ್ಟೂರು ಇಲ್ಲಿ 175 ನೇ ಪುಟದಲ್ಲಿ ಸಿಕ್ಕುತ್ತದೆ.

# ಭಾರತೀಯ ಸಾಹಿತ್ಯದ ನಿರ್ಮಾಣಕಾರರು

ಈ ಪ್ರಬಂಧಗಳಲ್ಲಿ ಭಾರತದ ಪ್ರಾಚೀನ ಇಲ್ಲವೆ ಅರ್ವಾಚೀನ ಸಾಹಿತ್ಯದಲ್ಲಿಯ ಮಹತ್ವದ ಮೈಲಿಗಲ್ಲುಗಳಿಗೆ ಕಾರಣ ಪುರುಷರಾಗಿರುವವರ ಪರಿಚಯವನ್ನು ಮಾಡಿಕೊಡಲಾಗುವುದು.

ರಾಜಾರಾಮ ಮೋಹನರಾಯ : ಸೌಮ್ಯೇಂದ್ರನಾಥ ಟಾಗೋರ । ಕೇಶವಸುತರು: ಪ್ರಭಾಕರ ಮಾಚ್ವೆ । ಇಳಂಗೋ ಅಡಿಗಳ್: ಎಂ. ವರದರಾಜನ್ । ಲಕ್ಷ್ಮಿನಾಥ ಬೇಜ್ ಬರೂವಾ : ಹೇಮ ಬರೂವಾ । ಕಬೀರ: ಪ್ರಭಾಕರ ಮಾಚ್ವೆ । ತೋರುದತ್: ಪದ್ಮಿನೀ ಸೇನ್‌ಗುಪ್ತ । ಪ್ರೇಮಚಂದ್: ಪ್ರಕಾಶಚಂದ್ರಗುಪ್ತ । ವೀರೇಶ ಲಿಂಗಂ: ವಿ. ಆರ್. ನಾರ್ಲ । ವೇಮನ: ವಿ. ಆರ್. ನಾರ್ಲ । ಪೋತನ: ಡಿ. ವೇಂಕಟಾವಧಾನಿ । ಗಾಲಿಬ್: ಎಂ. ಮುಜೀಬ್ । ಮೀರಾಬಾಯಿ ; ಉಷಾ ನಿಲ್ಸನ್ । ಷಾ ಲತೀಫ್: ಕಲ್ಯಾಣ್ ಬಿ. ಅದ್ವಾನಿ । ಈಶ್ವರಚಂದ್ರ ವಿದ್ಯಾಸಾಗರ: ಹಿರಣ್ಮಯ ಬ್ಯಾನರ್ಜಿ । ಚಂಡೀದಾಸ: ಸುಕುಮಾರಸೇನ್ । ಪ್ರಮಥ ಚೌಧುರಿ: ಅ. ಮುಖ್ಯೋಪಾಧ್ಯಾಯ । ಭಾರತೇಂದು ಹರಿಶ್ಚಂದ್ರ: ಮದನ್ ಗೋಪಾಲ್ । ಜೀವನಾನಂದ ದಾಸ್ : ಚಿ. ದಾಸ್‌ಗುಪ್ತ । ಕುಮಾರನ್ ಆಶಾನ್ : ಕೆ. ಎಂ. ಜಾರ್ಜ್ । ಕಾಜೀ ನಜರುಲ್ ಇಸ್ಲಾಮ್: ಗೋ. ಹಾಲ್ದಾರ್ । ನಜೀರ್ ಅಕಬರಾಬಾದಿ: ಮಹಮ್ಮದ್ ಹಸನ್ । ಕಂಬನ್: ಎಸ್. ಮಹರಾಜನ್ । ಜಯದೇವ: ಸುನೀತಿ ಕುಮಾರ್ ಚಾಟರ್ಜಿ । ಚಂದು ಮೆನನ್: ಟಿ. ಸಿ. ಎಸ. ಮೆನನ್ । ಮಹರ್ಷಿ ದೇವೇಂದ್ರನಾಥ ಠಾಕೂರ್ : ನಾ. ಚೌಧುರಿ । ನಮ್ಮಾಳ್ವಾರ್: ಅ. ಶ್ರೀನಿವಾಸ ರಾಘವನ್ । ಬಾಣಭಟ್ಟ: ಕೆ. ಕೃಷ್ಣಮೂರ್ತಿ । ನಾನಾಲಾಲ: ಯು. ಎಂ. ಮಣಿಯಾರ್ । ಬಂಕಿಮಚಂದ್ರಚಟರ್ಜಿ : ಸುಬೋಧಚಂದ್ರ ಸೆನ್‌ಗುಪ್ತ । ಶ್ರೀ ಅರವಿಂದರು: ಮನೋಜ್‌ದಾಸ್ । ಭಾರತಿ : ಪ್ರೇಮಾ ನಂದ ಕುಮಾರ್ । ಮಾಣಿಕ ವಾಚಕರು: ಜಿ. ವಲ್ಮೀಕನಾಥನ್ । ಫಕೀರ ಮೋಹನ ಸೇನಾಪತಿ: ಮಾಯಾಧಾರ್ ಮಾನ್‌ಸಿನ್ಹಾ । ಮಾಣಿಕ ವಂದ್ಯೋಪಾಧ್ಯಾಯ: ಸರೋಜ ಮೋಹನ್ ಮಿತ್ರ । ಸರೋಜಿನಿ ನಾಯಿಡು: ಪದ್ಮಿನಿ ಸೇನಗುಪ್ತ । ಪುರಂದರದಾಸರು: ಡಾ॥ ಜಿ. ವರದರಾಜ ರಾವ್ । ಪಂಜೆ ಮಂಗೇಶರಾವ್ : ವಿ. ಸೀತಾರಾಮಯ್ಯ.